# ಮೈಸೂರು ಚಲೋ ಚಳವಳಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕ
**ರಾಕೇಶ್ ಹೆಚ್.ಎಸ್.**

ಮಾರ್ಗದರ್ಶಕರು
**ಡಾ.ಕೆ. ಮೋಹನ್‌ಕೃಷ್ಣ ರೈ**
ಹಿರಿಯ ಶ್ರೇಣಿ ಅಧ್ಯಾಪಕರು
ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ - ೫೮೩ ೨೭೬

೨೦೦೮



# ಮೈಸೂರು ಚಲೋ ಚಳವಳಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)




ಸಂಶೋಧಕ
**ರಾಕೇಶ್ ಹೆಚ್.ಎಸ್.**

ಮಾರ್ಗದರ್ಶಕರು
**ಡಾ.ಕೆ. ಮೋಹನ್‌ಕೃಷ್ಣ ರೈ**
ಹಿರಿಯ ಶ್ರೇಣಿ ಅಧ್ಯಾಪಕರು
ಚರಿತ್ರೆ ವಿಭಾಗ







ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ – ೫೮೩ ೨೭೬


೨೦೦೮

# ಸಂಶೋಧಕನ ಪ್ರಮಾಣ ಪತ್ರ

**"ಮೈಸೂರು ಚಲೋ ಚಳವಳಿ"** ಎಂಬ ಶೀರ್ಷಿಕೆಯ ಸಂಶೋಧನ ನಿಬಂಧವನ್ನು ಡಾ.ಕೆ. ಮೋಹನ್‌ಕೃಷ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೦-೧೦-೨೦೦೮

Rakesh H.S.

(ರಾಕೇಶ್ ಹೆಚ್.ಎಸ್.)

ಸಂಶೋಧಕ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ- ೫೮೩ ೨೭೬.

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಮೈಸೂರು ಚಲೋ ಚಳವಳಿ"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ **ರಾಕೇಶ್ ಹೆಚ್.ಎಸ್**. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೦.೧೦.೦೮

(ಡಾ.ಕೆ. ಮೋಹನ್‌ಕೃಷ್ಣ ರೈ)
ಮಾರ್ಗದರ್ಶಕರು ಮತ್ತು
ಹಿರಿಯ ಶ್ರೇಣಿ ಅಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ– ೫೮೩ ೨೭೬

# ಮೈಸೂರು ಚಲೋ ಚಳವಳಿ

ಪರಿವಿಡಿ

ಅಧ್ಯಾಯ–೧
ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ / ೧–೧೧

ಅಧ್ಯಾಯ–೨
ವಸಾಹತು ಮೈಸೂರು / ೧೨–೩೦

೨.೧ ವಸಾಹತುಶಾಹಿ ಪ್ರವೇಶ, ಹಿತಾಸಕ್ತಿ ಮತ್ತು ಧೋರಣೆಗಳು
೨.೨ ಮಾದರಿ ಸಂಸ್ಥಾನವಾಗಿ ಮೈಸೂರು
೨.೩ ಸಂಸ್ಥಾನದ ಆಡಳಿತ ಸ್ವರೂಪ

ಅಧ್ಯಾಯ–೩
ಪ್ರಜಾಪ್ರತಿನಿಧಿ ಸಭೆ / ೩೧–೪೧

೩.೧ ರಚನೆ
೩.೨ ಉದ್ದೇಶ
೩.೩ ಸಾಧನೆ
೩.೪ ಮಿತಿಗಳು

ಅಧ್ಯಾಯ–೪
ಮೈಸೂರು ಚಲೋ ಚಳವಳಿ / ೪೨–೬೯

೪.೧ ಮೈಸೂರು ಕಾಂಗ್ರೆಸ್
೪.೨ ಚಳವಳಿಯ ಆರಂಭ
೪.೩ ಚಳವಳಿಯ ಹರಡುವಿಕೆ
೪.೪ ಪರಿಣಾಮಗಳು

ಅಧ್ಯಾಯ–೫

ಜವಾಬ್ದಾರಿ ಸರ್ಕಾರ ಸ್ಥಾಪನೆ / ೭೦-೮೩

೫.೧ ರಾಜಪ್ರಭುತ್ವದಿಂದ ಪ್ರಜಾಪ್ರಭುತ್ವಕ್ಕೆ
೫.೨ ಕೆ.ಸಿ. ರೆಡ್ಡಿ ನೇತೃತ್ವದ ಮಂತ್ರಿಮಂಡಲ ರಚನೆ
೫.೩ ಹೊಸ ಸವಾಲುಗಳು

ಅಧ್ಯಾಯ–೬

ಸಮಾರೋಪ / ೮೪-೮೯

ಅನುಬಂಧಗಳು / ೯೦

- ಗ್ರಂಥಋಣ / ೯೧
- ಸಂದರ್ಶನಗಳು / ೯೭
- ಛಾಯಾ ಚಿತ್ರಗಳು / ೯೮

# ೧೯೪೭ರಲ್ಲಿ ಚಳವಳಿ ನಡೆದ ಪ್ರಮುಖ ಪ್ರದೇಶಗಳು

ಹರಿಹರ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಹೊಸದುರ್ಗ
ಚಿಕ್ಕಮಗಳೂರು
ತುಮಕೂರು
ಶಿಡ್ಲಘಟ್ಟ
ಕೋಲಾರ
ಹಾಸನ
ಬೆಂಗಳೂರು
ಪಾಂಡವಪುರ
ಮಂಡ್ಯ
ಹುಣಸೂರು
ಟಿ. ನರಸೀಪುರ
ಮೈಸೂರು




ಮೂಲ: ಚಂದ್ರಶೇಖರ್ ಎಸ್., (ಸಂ.), ಕರ್ನಾಟಕ ಚರಿತ್ರೆ ಸಂಪುಟ–೭, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೧೯೯೭, ಪು. ೨೨೩

# ಮೈಸೂರು ಸಂಸ್ಥಾನದ ಭೂಪಟ

ಶಿವಮೊಗ್ಗ
ಚಿತ್ರದುರ್ಗ
ಚಿಕ್ಕಮಗಳೂರು
ತುಮಕೂರು
ಕೋಲಾರ
ಹಾಸನ
ಬೆಂಗಳೂರು
ಮಂಡ್ಯ
ಮೈಸೂರು




ಮೂಲ: ಚಂದ್ರಶೇಖರ್ ಎಸ್., (ಸಂ.), ಕರ್ನಾಟಕ ಚರಿತ್ರೆ ಸಂಪುಟ-೭, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೧೯೯೭, ಪು. ೨೨೩

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪ್ರಸ್ತಾವನೆ

ಭಾರತದಲ್ಲಿ ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಆರಂಭಗೊಂಡ ಸ್ವಾತಂತ್ರ್ಯ ಹೋರಾಟ ಆರಂಭದಲ್ಲಿ ಕೆಲವೇ ಪ್ರದೇಶಗಳಿಗೆ ಹಾಗೂ ಸಂಸ್ಥಾನಗಳಿಗೆ ಸೀಮಿತವಾಗಿದ್ದರೂ, ಕ್ರಮೇಣ ಅದು ವಿಸ್ತಾರಗೊಂಡು ರಾಷ್ಟ್ರೀಯತೆಯ ನೆಲೆಗಟ್ಟಿನಲ್ಲಿ ಭಾರತೀಯರ ಹೋರಾಟವಾಗಿ ರೂಪುಗೊಂಡಿತು. ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆಗೆ ಭಾರತದಲ್ಲಿ ಪ್ರಬಲ ಪ್ರತಿರೋಧಗಳು ಕಂಡುಬಂದರೂ, ಕೆಲವು ಸಂಸ್ಥಾನಗಳು ಬ್ರಿಟಿಷ್ ಆಳ್ವಿಕೆಯನ್ನು ಒಪ್ಪಿಕೊಂಡು ಆಶ್ರಿತ ಸಂಸ್ಥಾನಗಳಾಗುವುದರ ಮೂಲಕ ತಮ್ಮ ರಾಜತ್ವದ ಅಸ್ತಿತ್ವವನ್ನು ಉಳಿಸಿಕೊಂಡವು. ಇಂಥ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವೂ ಒಂದು. ಇಲ್ಲಿ ಎರಡು ಪ್ರಭುತ್ವಗಳ ದಬ್ಬಾಳಿಕೆ ಮೈಸೂರು ಸಂಸ್ಥಾನದ ಜನತೆಯ ಮೇಲೆ ಬಿದ್ದಿತು. ಈ ಎರಡೂ ಪ್ರಭುತ್ವಗಳನ್ನು ಮಟ್ಟಹಾಕಲು ಸಂಸ್ಥಾನದ ಜನತೆ ಮುಂದಾದರು. ಈ ಪ್ರಭುತ್ವಗಳನ್ನು ಹತ್ತಿಕ್ಕಿ ಪ್ರಜೆಗಳು ಜನಪ್ರಭುತ್ವವನ್ನು ಸ್ಥಾಪಿಸಲು ಕಾರ್ಯರೂಪಿಸತೊಡಗಿದರು. ಅದಕ್ಕೆ ಅನೇಕ ಶಾಂತಿಯುತ ಮಾರ್ಗಗಳನ್ನು ಅನುಸರಿಸಿದರು. ಆದರೆ ಅದ್ಯಾವುದು ಸಫಲವಾಗದಿದ್ದಾಗ ಚಳವಳಿ ಎಂಬ ಹರಿತವಾದ ಖಡ್ಗವನ್ನು ಬಳಸಿದುದರ ಫಲವೇ 'ಮೈಸೂರು ಚಲೋ ಚಳವಳಿ.'

ಬ್ರಿಟಿಷರು ತಮ್ಮ ವಸಾಹತುಶಾಹಿ ನೀತಿಯಿಂದ ಸಾಮ್ರಾಜ್ಯಶಾಹಿ ನೀತಿಗೆ ಮುಂದಾಗಿ ಭಾರತವನ್ನು ಹಾಗೂ ಕರ್ನಾಟಕವನ್ನು ತುಂಡು ತುಂಡುಗಳನ್ನಾಗಿಸಿದರು. ಅವರ ಒಡೆದು ಆಳುವ ನೀತಿಯಿಂದ ಭಾರತವು ಇಬ್ಭಾಗವಾಗಿ ೧೧ ಪ್ರಾಂತ್ಯಗಳು ಹಾಗೂ ೫೬೫ ಆಶ್ರಿತ ಸಂಸ್ಥಾನಗಳು ಎಂದು ವಿಂಗಡಿಸಲ್ಪಟ್ಟವು. ಇವರ ಮೂಲ ಧೋರಣೆ ದೇಶವನ್ನು ವಿಭಾಗಿಸಿ ಅನೇಕ ಭಾಗಗಳನ್ನಾಗಿ ಮಾಡಿ ತಮ್ಮ ಅಧೀನದಲ್ಲಿಯೆ ಎಲ್ಲ ಪ್ರದೇಶಗಳನ್ನು ಇಟ್ಟುಕೊಂಡು ಪರೋಕ್ಷ ಹಾಗೂ ಪ್ರತ್ಯಕ್ಷ ಆಡಳಿತ ನಡೆಸುವುದು ಹಾಗೂ ಅಲ್ಲಿನ ವರಮಾನವನ್ನು ತಮ್ಮ ನಾಡಿಗೆ ವಿನಿಯೋಗಿಸಿಕೊಂಡು ವಸಾಹತುವನ್ನು ನಾಶಗೊಳಿಸುವುದಾಗಿತ್ತು. ಹಾಗೂ ತಮ್ಮ

ಪ್ರಭುತ್ವದಿಂದ ಎಲ್ಲರನ್ನು ಒಟ್ಟುಗೂಡಿಸಿ, ಅಧೀನರನ್ನಾಗಿಸಿ ತಮ್ಮ ತಾಯ್ನಾಡನ್ನು ಬಂಡವಾಳಶಾಹಿ ದೇಶವನ್ನಾಗಿ ಬೆಳೆಸುವುದಾಗಿತ್ತು.

ಬ್ರಿಟಿಷ್ ಆಳ್ವಿಕೆಯ ಫಲವಾಗಿ ೨೦ನೇ ಶತಮಾನದ ಕೊನೆಯಲ್ಲಿ ಭಾರತವು ಪೂರ್ಣವಾಗಿ ವಸಾಹತು ನೆಲೆಯಾಗಿ ರಚಿಸಲ್ಪಟ್ಟಿತು. ಅದರಲ್ಲೂ ೧೮ನೇ ಶತಮಾನದಲ್ಲಿಯೇ ಮೈಸೂರು ಸಂಸ್ಥಾನವನ್ನು ವಸಾಹತನ್ನಾಗಿಸಿ ಇಲ್ಲಿರುವ ವ್ಯಾಪಕ ಸಂಪನ್ಮೂಲ ಹಾಗೂ ಭೂಭಾಗವನ್ನು ಗುರುತಿಸಿ, ಇದನ್ನು ಆಶ್ರಿತ ಸಂಸ್ಥಾನವನ್ನಾಗಿಸಿ ಇಲ್ಲಿ ದೇಶೀಯ ರಾಜರಿಗೆ ಆಡಳಿತ ನಿರ್ವಹಣೆ ವಹಿಸಿಕೊಟ್ಟರು. ಇವರ ಪ್ರತಿನಿಧಿಯಾಗಿ ಯುರೋಪಿಯನ್ ಅಧಿಕಾರಿಯನ್ನು ನೇಮಿಸಿದ್ದರು. ಬ್ರಿಟಿಷ್ ಆಡಳಿತದ ಪ್ರಭಾವ ಭಾರತದ ಜನತೆಯ ಮೇಲೆ ಬೀರಿದ ಪರಿಣಾಮದ ಫಲವಾಗಿ ಜನತೆ ಎಲ್ಲಾ ತರಹದ ತ್ಯಾಗ ಬಲಿದಾನಕ್ಕೆ ಸಿದ್ಧರಾಗಿ, ಅನೇಕ ನಾಯಕರ ಜೊತೆಗೂಡಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದರು.

ಬ್ರಿಟಿಷ್ ಆಳ್ವಿಕೆಯಲ್ಲಿ ಭಾರತದ ಎಲ್ಲ ಆಡಳಿತ ಘಟಕಗಳೂ ಒಂದೇ ಕ್ರಮದಲ್ಲಿ ಆಳಲ್ಪಡುತ್ತಿರಲಿಲ್ಲ. ಬ್ರಿಟಿಷರ ನೇರ ಹತೋಟಿಯಲ್ಲಿದ್ದ ಪ್ರಾಂತ್ಯಗಳು ಭಾರತೀಯ ಅರಸರ ಆಳ್ವಿಕೆಗೆ ಒಳಪಟ್ಟಿದ್ದ ದೇಶೀಯ ಸಂಸ್ಥಾನಗಳಿಗೂ ನಡುವೆ ವ್ಯತ್ಯಾಸವಿತ್ತು. ಅದರ ಮುಖ್ಯ ಲಕ್ಷಣವೆಂದರೆ ಸಂಸ್ಥಾನಗಳಲ್ಲಿ ಬ್ರಿಟಿಷರ ಅಧಿಕಾರ ಎದ್ದು ಕಾಣುತ್ತಿರಲಿಲ್ಲ. ಬ್ರಿಟಿಷ್ ಕಾಲದ ಭಾರತ ಶೇಕಡ ೪೫ ರಷ್ಟು ಪ್ರದೇಶ, ಶೇಕಡ ೨೫ರಷ್ಟು ಜನಸಂಖ್ಯೆ ದೇಶೀಯ ಸಂಸ್ಥಾನಗಳಿಗೆ ಸೇರಿತ್ತು. ಇಲ್ಲಿ ಮೈಸೂರು ಪ್ರಗತಿಪರ ಆಡಳಿತ ನೀತಿಗಳನ್ನು ಅನುಸರಿಸುತ್ತಿತ್ತು. ದೇಶೀಯ ಸಂಸ್ಥಾನಗಳತ್ತ ಬ್ರಿಟಿಷ್ ಸಂಸ್ಥಾನ ತಳೆದ ಹಿತಾಸಕ್ತಿ ಹಾಗೂ ಕಾಂಗ್ರೆಸ್ಸಿನ ದೇಶೀಯ ಸಂಸ್ಥಾನಗಳ ನೀತಿಯಿಂದ ಮೈಸೂರು ಸಂಸ್ಥಾನದಲ್ಲಿ ಜನಾಂದೋಲನಗಳು ಪ್ರಾರಂಭವಾದವು.

ಸ್ವಾತಂತ್ರ್ಯದ ಬಯಕೆ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಇದ್ದು, ಅದು ಅವನ ಜರೂರಾಗಿ ಸದಾಕಾಲ ಕೆಣಕುತ್ತಲೇ ಇರುತ್ತದೆ. ತನಗೆ ತೊಂದರೆಯಾದಾಗ ವ್ಯಕ್ತಿಯು ವ್ಯವಸ್ಥೆಯ ವಿರುದ್ಧ ಹೋರಾಡಲು ಪ್ರಯತ್ನಿಸುತ್ತಾನೆ. ಈ ರೀತಿ ಹೋರಾಟ ಸಾಮೂಹಿಕವಾಗಿ ನಡೆದಾಗ ಅದು ಚಳವಳಿಯಾಗಿ ರೂಪಪಡೆಯುತ್ತದೆ. ಹಾಗೆಯೇ ಭಿನ್ನ ಭಿನ್ನ ಸಾಮಾಜಿಕ ಸಂಸ್ಕೃತಿಯಲ್ಲಿ ಸ್ವಾತಂತ್ರ್ಯದ ಅಲೆಗಳು ವಿವಿಧ ರೀತಿಯಲ್ಲಿ ಗೋಚರಿಸುತ್ತವೆ.

ಮೈಸೂರಿನ ಒಡೆಯರ ಚರಿತ್ರೆಯನ್ನು ಅವಲೋಕಿಸುವಾಗ ೧೫ನೇ ಶತಮಾನದ ಆರಂಭದಲ್ಲಿ ವಿಜಯನಗರದ ಪೂರ್ವಿಕರು ದಕ್ಷಿಣ ಮೈಸೂರಿನಲ್ಲಿ ಒಂದು ಪಾಳೆಪಟ್ಟನ್ನು ಸ್ಥಾಪಿಸಿದರು ಎನ್ನುವ ಅಂಶ ತಿಳಿದುಬರುತ್ತವೆ. ನಂತರ ಇಲ್ಲಿ ಏಳಿಗೆಗೆ ಬಂದ ಯಾದವ ವಂಶದ ಯದುರಾಯ ಮತ್ತು ಕೃಷ್ಣರಾಯ ಎಂಬುವವರು ಕ್ರಿ.ಶ. ೧೩೯೯ರಲ್ಲಿ 'ಒಡೆಯ' ಸಂತತಿಯನ್ನು ಸ್ಥಾಪಿಸಿದರು. ಇವರು ವಿಜಯನಗರದ ಸಂಪ್ರದಾಯವನ್ನು

ಮುಂದುವರಿಸಿಕೊಂಡು ಬಂದರು. ವಿಜಯನಗರ ಸಾಮ್ರಾಜ್ಯ ಆಳಿ ಅಳಿದ ಮೇಲೆ ಈ ಒಡೆಯರು ಪ್ರಾಮುಖ್ಯ ಪಡೆದು ತಮ್ಮ ರಾಜ್ಯವನ್ನು ವಿಸ್ತರಿಸಿ ಭದ್ರಪಡಿಸಿದರು. ಹಾಗೂ ಒಂದು ದೃಢವಾದ ಆಡಳಿತ ವ್ಯವಸ್ಥೆಗೂ ಬುನಾದಿ ಹಾಕಿದರು. ಒಂದು ರೀತಿಯಲ್ಲಿ ಮೈಸೂರು ವಿಜಯನಗರದ ರಾಜಕೀಯ ಉತ್ತರಾಧಿಕಾರಿಯಾಯಿತು. ಈ ಸಂತತಿಯನ್ನು ಸುಮಾರು ೫೭೦ ವರ್ಷಗಳ ಕಾಲ ೨೫ ಅರಸರು ಆಳ್ವಿಕೆ ನಡೆಸಿದರು.[೧] ಸಂಸ್ಥಾನದಲ್ಲಿ ಆದ ಕೆಲವು ಗೊಂದಲಗಳು ಹೈದರಾಲಿ ಹಾಗೂ ಟಿಪ್ಪುಸುಲ್ತಾನ್‌ರು ಅಧಿಕಾರಕ್ಕೆ ಬರುವಂತೆ ಮಾಡಿತು. ಈ ಸಂದರ್ಭದಲ್ಲಿ ಬ್ರಿಟಿಷ್ ವಸಾಹತು ನೆಲೆಗಳು ದಕ್ಷಿಣ ಭಾರತವನ್ನು ಅದರಲ್ಲೂ ಕರ್ನಾಟಕವನ್ನು ಪ್ರವೇಶಿಸುತ್ತಿದ್ದುದನ್ನು ಕಂಡು, ಭಾರತದಲ್ಲಿ ಕರ್ನಾಟಕ ರಾಜ್ಯ ಬ್ರಿಟಿಷರ ಪ್ರಾಬಲ್ಯ ವಿಸ್ತರಣೆಯ ವಿರುದ್ಧ ಹೋರಾಡಿದ ಪ್ರಥಮ ರಾಜ್ಯವೆಂದು ಹೇಳಬಹುದು. ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಈ ಹೋರಾಟದ ನಾಯಕರಾಗಿದ್ದರು. ಮೈಸೂರು, ಬ್ರಿಟಿಷರ ವಿರುದ್ಧ ಎದುರಿಸಿದಷ್ಟು ಯುದ್ಧಗಳನ್ನು ಮತ್ತಾವ ಪ್ರಾಂತವು ಎದುರಿಸಲಿಲ್ಲ. ಅದೇ ರೀತಿ ಬ್ರಿಟಿಷರ ಧೋರಣೆ ಮತ್ತು ಹಿತಾಸಕ್ತಿಗಳನ್ನು ಎಲ್ಲ ಸಂಸ್ಥಾನಗಳಿಗಿಂತ ಮಿಗಿಲಾಗಿ ಒಪ್ಪಿಕೊಂಡು ಆಶ್ರಿತ ಸಂಸ್ಥಾನವಾಗಿ ಬೆಳೆಯಿತು.

೧೭೯೯ರಲ್ಲಿ ಟಿಪ್ಪುವಿನ ಮರಣದ ನಂತರ ಬ್ರಿಟಿಷರು ಮೈಸೂರು ಸಂಸ್ಥಾನವನ್ನು ಅನೇಕ ಭಾಗಗಳನ್ನಾಗಿ ವಿಂಗಡಿಸಿ, ಒಂದು ಭಾಗವನ್ನು ಮತ್ತೆ ಮೈಸೂರು ಒಡೆಯರ ಆಳ್ವಿಕೆಗೆ ಬಿಟ್ಟುಕೊಟ್ಟು ಒಡೆಯರನ್ನು ಸಾಂಕುಶ ರಾಜ್ಯಾಡಳಿತಕ್ಕೆ ಎಡೆಮಾಡಿಕೊಟ್ಟರು. ಇದರೊಂದಿಗೆ ಮೈಸೂರು ಸಂಸ್ಥಾನ ಪರೋಕ್ಷವಾಗಿ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತು. ೧೮೩೦ರ ಸುಮಾರಿಗೆ ನಡೆದ ನಗರ ದಂಗೆಗೆ ರಾಜರ ಅಸಮರ್ಥತೆಯೇ ಕಾರಣವೆಂದು ಬಗೆದು ೧೮೩೧ರಿಂದ ೧೮೮೧ರವರೆಗೆ ಬ್ರಿಟಿಷ್ ಕಮಿಷನರ ಆಳ್ವಿಕೆಗೆ ಒಳಪಟ್ಟಿತು. ಬ್ರಿಟಿಷರು ಸಹಾಯಕ ಸೈನ್ಯ ಪದ್ಧತಿಯ ಅಸ್ತ್ರದಿಂದ ೧೮೩೦ರ ವೇಳೆಗೆ ಭದ್ರವಾದರು. ಅಂದಿನಿಂದ ೧೮೫೭ರ ದಂಗೆಯವರೆಗೆ ಏನಾದರೊಂದು ನೆಪಮಾಡಿ ದೇಶೀಯ ಸಂಸ್ಥಾನಗಳನ್ನು ತಮ್ಮ ನೇರವಾದ ಆಡಳಿತಕ್ಕೆ ಒಳಪಡಿಸಿಕೊಳ್ಳುವುದು ಬ್ರಿಟಿಷರ ಧೋರಣೆಯಾಗಿತ್ತು. ೧೮೩೦ರ ವೇಳೆಗೆ ಈ ಸಂಸ್ಥಾನವು ತಮ್ಮ ರಾಜಕೀಯ ಅಸ್ತಿತ್ವವನ್ನು ಕಳೆದುಕೊಳ್ಳತೊಡಗಿತು.

೧೮೫೭ರ ದಂಗೆಯ ನಂತರ ಬ್ರಿಟಿಷ್ ಸರ್ಕಾರವು ಭಾರತದ ಆಳ್ವಿಕೆಯನ್ನು ತಾನೆ ವಹಿಸಿಕೊಂಡ ಮೇಲೆ ಕಂಪನಿಯು ಆಯಾ ರಾಜರುಗಳೊಂದಿಗೆ ಮಾಡಿಕೊಂಡಿದ್ದ ಒಪ್ಪಂದಗಳನ್ನು ಪಾಲಿಸುವುದು ಬ್ರಿಟಿಷರ ನೀತಿಯಾಯಿತು. ಆಡಳಿತಕ್ಕೆ ದೇಶೀಯ ಬೆಂಬಲದ ಅಡಿಪಾಯ ಒದಗಿಸಿಕೊಳ್ಳಲು ಈ ಸಂಸ್ಥಾನಗಳು ಬ್ರಿಟಿಷರಿಗೆ ಸಹಾಯಕವಾದವು. ವಂಶಪಾರಂಪರ್ಯ ಹಕ್ಕುಗಳನ್ನು ಪಡೆದ ಅರಸರು, ಜಮೀನ್ದಾರರು ಬ್ರಿಟಿಷ್ ಆಳ್ವಿಕೆಯನ್ನು ಬೆಂಬಲಿಸಿದರು. ರಾಜರು ಬ್ರಿಟಿಷರ ಮನವೊಲಿಸಿದುದರ ಪರಿಣಾಮವಾಗಿ ೧೮೮೧ರಲ್ಲಿ ಪುನಃ

ಮೈಸೂರು ಸಂಸ್ಥಾನ ರಾಜತ್ವದ ಪರೋಕ್ಷ ಆಡಳಿತಕ್ಕೆ ಒಳಪಟ್ಟಿತು. ಆಗ ಆಡಳಿತ ನಡೆಸಲು ಕಾರ್ಯಾಂಗ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ಮುಖ್ಯಸ್ಥರನ್ನಾಗಿ ದಿವಾನರನ್ನು ನೇಮಿಸಿದರು. ಅವರ ನೆರವಿಗೆ ಕೌನ್ಸಿಲರುಗಳೆಂಬ ಇಬ್ಬರು ಸದಸ್ಯರಿರುತ್ತಿದ್ದರು.

ಎಲ್ಲ ಸ್ವಾತಂತ್ರ್ಯ ಚಳವಳಿಗಳಂತೆ ಈ ಚಳವಳಿಯನ್ನು ಸಹ ಕಾಂಗ್ರೆಸ್ ಪಕ್ಷಕ್ಕೆ ಹಾಗೂ ಮೇಲ್ವರ್ಗದ ಜನಕ್ಕೆ ಸೀಮಿತಗೊಳಿಸಲಾಗಿದೆ. ಇಲ್ಲಿ ಕಾಂಗ್ರೆಸ್ ಪಕ್ಷ ಹಾಗೂ ಮೇಲ್ವರ್ಗದ ಜನತೆ ಈ ಚಳವಳಿಯನ್ನು ಮೊದಲಿಗೆ ಆರಂಭಿಸಿದರು. ನಂತರ ಮೈಸೂರಿನ ಎಲ್ಲ ವರ್ಗಗಳ ಜನತೆಯೂ ಸೇರಿ ಪ್ರಜಾಪ್ರಭುತ್ವದ ನೆಲೆಯಲ್ಲಿ ಈ ಚಳವಳಿಯಲ್ಲಿ ಪಾಲ್ಗೊಂಡು ಶಕ್ತಿಯನ್ನು ನೀಡಿದರು. ೧೮೮೧ರಲ್ಲಿ ಒಂದು ಪ್ರಜಾಪ್ರತಿನಿಧಿ ಎಂಬ ಶಕ್ತಿಹೀನ ಸಂಸ್ಥೆಯನ್ನು ಬ್ರಿಟಿಷರ ನೆರವಿನಿಂದ ರಾಜರು, ಪ್ರಜೆಗಳನ್ನು ಹಾಗೂ ಅವರ ಹೋರಾಟಗಳನ್ನು ನಿಯಂತ್ರಣಕ್ಕೆ ತರಲು ಸ್ಥಾಪಿಸಿದರು. ಆದರೆ ಅದೇ ಸಭೆಯಲ್ಲಿ ಜನತೆಯು ರಾಜಪ್ರಮುಖರೊಂದಿಗೆ ಹತ್ತಿರವಾಗಿ ಸಮಾಜದ ಸ್ಥಿತಿಗತಿಗಳ, ಆಡಳಿತ ಕಾರ್ಯವೈಖರಿಯನ್ನು ತಿಳಿದುಕೊಂಡು ಜನತೆ ಒಟ್ಟುಗೂಡುವಲ್ಲಿ ಸಹಾಯಕವಾಗಿ ಬ್ರಿಟಿಷರಿಗೆ ಹಾಗೂ ಮಹಾರಾಜರಿಗೆ ಸಿಂಹಸ್ವಪ್ನವಾಯಿತು. ಬ್ರಿಟಿಷ್ ಭಾರತದಲ್ಲಿ ೧೯೧೯ರಲ್ಲಿ ಮಾಂಟಗೋ- ಚೆಲ್ಮ್ಸ್‌ಫರ್ಡ್[೨] ಸುಧಾರಣೆಗಳ ಮೂಲಕ ದ್ವಿಮುಖ ಪದ್ಧತಿಯು ಜಾರಿಗೆಬಂದು ಪ್ರಾಂತ್ಯಗಳಲ್ಲಿ ಜವಾಬ್ದಾರಿ ಸರ್ಕಾರ ಅಂಕುರವಾಯಿತು. ದೇಶಿ ಸಂಸ್ಥಾನಗಳ ಸ್ಥಿತಿಗತಿಗಳು ಬೇರೆಯಾಗಿದ್ದುದರಿಂದ ಕೆಲವು ಸ್ವಾಯತ್ತವಾದ ಅನುಕೂಲಗಳು ಇದ್ದುದರಿಂದ ರಾಷ್ಟ್ರೀಯ ಕಾಂಗ್ರೆಸ್ ಆರಂಭದಲ್ಲಿ ದೇಶಿಯ ಸಂಸ್ಥಾನಗಳ ವ್ಯವಹಾರದಲ್ಲಿ ಕೈಹಾಕಲಿಲ್ಲ. ಸಂಸ್ಥಾನದ ಜನರ ನ್ಯಾಯಬದ್ಧ ರಾಜಕೀಯ ಆಶೋತ್ತರಗಳಿಗೆ ಕೇವಲ ನೈತಿಕ ಬೆಂಬಲ ಕೊಡುತ್ತಿತ್ತು. ಆದ ಕಾರಣ ಮೈಸೂರಿನಲ್ಲಿಯೇ ಸ್ವತಂತ್ರವಾಗಿ ಸ್ಥಾಪಿತವಾದ ಕಾಂಗ್ರೆಸ್ ಸಂಸ್ಥೆ ಚಳವಳಿಯ ರೂವಾರಿಯಾಗಿ ಜನತೆಯನ್ನು ಒಟ್ಟುಗೂಡಿಸಿತು. ಹಾಗೂ ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಪ್ರಬಲ ಬುನಾದಿ ಹಾಕಿತು.

ರಾಷ್ಟ್ರಾದ್ಯಂತ ನಡೆದ ಹೋರಾಟದ ಫಲವಾಗಿ ೧೯೪೭ರ ಆಗಸ್ಟ್ ೧೫ರಂದು ಬ್ರಿಟಿಷರು ಭಾರತವನ್ನು ಸ್ವತಂತ್ರಗೊಳಿಸಿದರು. ಆಗ ಮೈಸೂರು ಸಂಸ್ಥಾನವೂ ಸಹ ಸ್ವತಂತ್ರ್ಯ ಹೊಂದಿತು. ಮೈಸೂರು ಜನತೆಯ ಪ್ರಬಲ ಒತ್ತಾಸೆ ಮೇರೆಗೆ ಸಂಸ್ಥಾನವು ಭಾರತದ ಒಕ್ಕೂಟಕ್ಕೆ ಸೇರ್ಪಡೆಯಾಯಿತು. ನಂತರವೂ ರಾಜತ್ವದ ಆಳ್ವಿಕೆ ಮುಂದುವರೆದು, ಪ್ರಜಾಪ್ರಭುತ್ವಕ್ಕೆ ಅವಕಾಶ ಕೊಡಲಿಲ್ಲ. ಆಗ ಮನೆಯ ಯಜಮಾನನ ವಿರುದ್ಧವೇ ಮನೆಯಲ್ಲಿನ ಇತರರು ತಿರುಗಿ ಬೀಳುವ ಪರಿಸ್ಥಿತಿ ಉದ್ಭವವಾಯಿತು. ಅಂದರೆ ಮೈಸೂರು ಸಂಸ್ಥಾನದ ಜನತೆ ಮೈಸೂರು ಕಾಂಗ್ರೆಸ್ಸಿನ ನೇತೃತ್ವದಲ್ಲಿ ಸಂಸ್ಥಾನದಲ್ಲಿ ಮೈಸೂರು ಚಲೋ ಚಳವಳಿ ನಡೆಸಿ ಜವಾಬ್ದಾರಿ ಸರ್ಕಾರದ ಜನಪ್ರಭುತ್ವವನ್ನು ಸ್ಥಾಪಿಸಿ, ರಾಜಪ್ರಭುತ್ವವನ್ನು ಕೊನೆಗಾಣಿಸಿತು. ಭಾರತ ಸ್ವಾತಂತ್ರ್ಯ ನಂತರ ನಡೆದ ಈ ಚಳವಳಿ ಮೈಸೂರು ಸಂಸ್ಥಾನದಲ್ಲಿ ಅತ್ಯಂತ ವ್ಯಾಪಕ ಹಾಗೂ ಪ್ರಬಲ

ಚಳವಳಿಯಾಗಿ ಚರಿತ್ರೆ ಸೇರಿದೆ. ಬ್ರಿಟಿಷ್ ಸರ್ಕಾರ ಕಾಲ್ತೆಗೆದಾಗ ಎಲ್ಲಾ ಸಂಸ್ಥಾನಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು ಎಂಬುದಕ್ಕೆ ಮೈಸೂರು ಸಂಸ್ಥಾನ ಅತ್ಯುತ್ತಮ ಉದಾಹರಣೆಯಾಗಿದೆ.

ಆಶ್ರಿತ ಸಂಸ್ಥಾನವಾಗಿದ್ದಾಗ ಸಂವಿಧಾನಾತ್ಮಕ ರಾಜಪ್ರಭುತ್ವವಾಗಿ ಕಾಣಿಸಿಕೊಂಡಿದ್ದ ಮೈಸೂರು ಪ್ರಭುತ್ವ, ನಿಜವಾದ ಪ್ರಜಾಪ್ರಭುತ್ವ ದೇಶದಲ್ಲಿ ಅಸ್ತಿತ್ವಕ್ಕೆ ಬಂದಾಗ ಅದನ್ನು ಸ್ವೀಕರಿಸಲು ಹಾಗೂ ಅದರಲ್ಲಿ ವಿಲೀನವಾಗಲು ಹಿಂದೇಟು ಹಾಕಿತು. ಇದು ಮಾದರಿ ಸಂಸ್ಥಾನವಾಗಿ ಗುರುತಿಸಿಕೊಂಡಿದ್ದ ಮೈಸೂರು ಎಷ್ಟರಮಟ್ಟಿಗೆ ಮಾದರಿಯಾಗಿತ್ತು ಹಾಗೂ ಯಾರಿಗೆ ಮಾದರಿಯಾಗಿತ್ತು ಎನ್ನುವ ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ. ಈ ತಾತ್ವಿಕ ವಿಚಾರಗಳ ಕುರಿತು ಪ್ರಸ್ತುತ ಅಧ್ಯಯನದಲ್ಲಿ ಕೂಲಂಕಷವಾಗಿ ಚರ್ಚಿಸಲಾಗಿದೆ.

ಮೈಸೂರು ಸಂಸ್ಥಾನವನ್ನು ಕುರಿತ ಚರಿತ್ರೆ ಬರವಣಿಗೆಗಳಲ್ಲಿ ಮೈಸೂರು ಚಲೋ ಚಳವಳಿ ಅಥವಾ ಅರಮನೆ ಸತ್ಯಾಗ್ರಹ ಕುರಿತು ಅಲ್ಪ ವಿವರಗಳು ಮಾತ್ರ ಸಿಗುತ್ತವೆ. ಮೈಸೂರು ಸಂಸ್ಥಾನವನ್ನು ಕುರಿತು ಸಾಕಷ್ಟು ಅಧ್ಯಯನಗಳು ಪಾಶ್ಚಾತ್ಯ ಮತ್ತು ದೇಶೀಯ ವಿದ್ವಾಂಸರಿಂದ ನಡೆದಿದೆ. ಹಯವದನ್ ರಾವ್ ಸಿ. ರವರ "ಮೈಸೂರು ಗೆಜೆಟಿಯರ್ ಮತ್ತು ಹಿಸ್ಟರಿ ಆಫ್ ಮೈಸೂರು",[೩] ವೀರತಪ್ಪ ಕೆ. ಇವರ "ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ",[೪] ದೊರೆಸ್ವಾಮಿ ಎಚ್.ಎಸ್ ರವರ "ಹೋರಾಟದ ದಿಟ್ಟ ಹೆಜ್ಜೆಗಳು",[೫] ಎಸ್. ಚಂದ್ರಶೇಖರ್ ರವರ "ಆಧುನಿಕ ಕರ್ನಾಟಕದ ಆಂದೋಲನಗಳು",[೬] ಮತ್ತು "ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು",[೭] ಹಾಲಪ್ಪ ಜಿ.ಎಸ್.(ಸಂ) ರವರ "ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ",[೮] ಬೋರ್ನ್ ಹೆಟ್ನೆ ರವರ "ದಿ ಪೊಲಿಟಿಕಲ್ ಎಕನಮಿ ಆಫ್ ಇನ್‌ಡೈರೆಕ್ಟ್ ರೂಲ್ ಮೈಸೂರು",[೯] ಜೇಮ್ಸ್ ಮೇನರ್ ರವರ "ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು",[೧೦] ಸೂರ್ಯನಾಥ್ ಕಾಮತ್ ರವರ "ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂಪುಟ ೧,೨,೩",[೧೧] ಚಂದ್ರಶೇಖರ್ ಎಸ್. ರವರ "ದಕ್ಷಿಣ ಭಾರತ: ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ",[೧೨] ಎನ್.ಪಿ. ಶಂಕರನಾರಾಯಣ ರಾವ್ ಅವರ "ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು",[೧೩] ಹಂಡ ಆರ್.ಎಲ್ ರವರ "ಹಿಸ್ಟರಿ ಆಫ್ ಫ್ರೀಡಮ್ ಸ್ಟ್ರಗಲ್ ಇನ್ ಪ್ರಿನ್ಸಲಿ ಸ್ಟೇಟ್",[೧೪] ಶಾಮರಾವ್ ಎಂ. ಅವರ "ಮಾಡರ್ನ್ ಮೈಸೂರು",[೧೫] ಮಾರ್ಕ್ ವಿಲ್ಕ್ಸ್‌ರವರ "ಹಿಸ್ಟರಿ ಆಫ್ ಮೈಸೂರು" ಎಸ್. ಚಂದ್ರಶೇಖರ್‌ರವರ "ಕರ್ನಾಟಕ ಚರಿತ್ರೆ ಸಂಪುಟ–೭",[೧೬] ಮುಂತಾದವು ಈ ನಿಟ್ಟಿನಲ್ಲಿ ಹೆಸರಿಸಬಹುದಾದ ಕೆಲವು ಕೃತಿಗಳು. ಈ ಕೃತಿಗಳ ಜೊತೆಗೆ ಇನ್ನೂ ಹಲವಾರು ಆಕರಗಳನ್ನು ಪ್ರಸ್ತುತ ಅಧ್ಯಯನಕ್ಕೆ ಉಪಯೋಗಿಸಿಕೊಳ್ಳಲಾಗಿದೆ. ಅವುಗಳೆಂದರೆ ಮೌಖಿಕ ಆಕರಗಳು, ನೇರ ಸಂದರ್ಶನಗಳು, ಪತ್ರಿಕೆಗಳು, ಕರಪತ್ರಗಳು ಹಾಗೂ ರಾಜ್ಯ ಸರ್ಕಾರದ ಪತ್ರಗಳು. ಇವುಗಳ

ಮೂಲಕ ಈ ವಿಷಯಕ್ಕೆ ಸಂಬಂಧಪಟ್ಟ ಹಲವಾರು ರೀತಿಯ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಇವೆಲ್ಲವುಗಳ ಆಧಾರದ ಮೇಲೆ ಮೈಸೂರು ಚಲೋ ಚಳವಳಿಯ ಕುರಿತು ಸಮಗ್ರ ಅಧ್ಯಯನವನ್ನು ನಡೆಸಲಾಗಿದೆ.

## ಉದ್ದೇಶ

ಮೈಸೂರು ಸಂಸ್ಥಾನದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ವಿವಿಧ ಆಯಾಮಗಳನ್ನು ಗುರುತಿಸುವಾಗ, ಮೈಸೂರು ಚಲೋ ಚಳವಳಿ ವ್ಯಾಪಕ ಬೆಂಬಲ ಪಡೆದುಕೊಂಡ ಪ್ರಜಾ ಚಳವಳಿಯಾಗಿ ಕಂಡುಬರುತ್ತದೆ. ಇದು ರಾಜಪ್ರಭುತ್ವವನ್ನು ಹಾಗೂ ಅದರ ಧೋರಣೆಯನ್ನು ಪ್ರಶ್ನಿಸಿ, ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಜಾರಿಗೆ ತರಲು ಮುಂದಾಯಿತು. ಕರ್ನಾಟಕ ಸ್ವಾತಂತ್ರ್ಯ ಹೋರಾಟದ ಕುರಿತು ಬಂದಿರುವ ಪುಸ್ತಕಗಳಲ್ಲಿ ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಹೋರಾಟದ ಕುರಿತು ಅದರಲ್ಲೂ ಮೈಸೂರು ಚಲೋ ಚಳವಳಿಯ ಕುರಿತು ಅಲ್ಲೊಂದು ಇಲ್ಲೊಂದು ವಿವರಗಳಷ್ಟೆ ಸಿಗುತ್ತವೆ. ಪ್ರಸ್ತುತ ಅಧ್ಯಯನವು ಹಲವಾರು ಸೂಕ್ಷ್ಮ ವಿಚಾರಗಳತ್ತ ಗಮನಹರಿಸುವ ಉದ್ದೇಶವನ್ನು ಇಟ್ಟುಕೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಒಟ್ಟು ಆರು ಅಧ್ಯಾಯಗಳಿವೆ. **ಅಧ್ಯಾಯ ಎರಡರಲ್ಲಿ,** ವಸಾಹತು ಮೈಸೂರು ಕುರಿತು ಚರ್ಚೆ ನಡೆಸಲಾಗಿದೆ. ವಸಾಹತುಶಾಹಿಯ ಪ್ರವೇಶ ಭಾರತಕ್ಕೆ ೧೬ನೇ ಶತಮಾನದಲ್ಲಿಯೇ ಕಾಲಿಟ್ಟು ನಂತರ ಇಲ್ಲಿ ಅವರ ಒಡೆದು ಆಳುವ ನೀತಿಯಿಂದ ಅನೇಕ ಭಾಗಗಳನ್ನಾಗಿ ಮಾಡಿ ಪ್ರತಿಯೊಂದನ್ನು ತಮ್ಮ ಆಳ್ವಿಕೆಗೆ ಒಳಪಡಿಸಿದರು. ಬ್ರಿಟಿಷ್ ವಸಾಹತುಶಾಹಿಯು ಮೈಸೂರು ಸಂಸ್ಥಾನವನ್ನು ವಸಾಹತನ್ನಾಗಿಸಿತು. ಅವರ ಧೋರಣೆಯು ಇಲ್ಲಿನ ಆರ್ಥಿಕ ವ್ಯವಸ್ಥೆಯನ್ನು ತನ್ನದಾಗಿಸಿಕೊಂಡು, ಹಾಗೂ ಎಲ್ಲಾ ಪ್ರದೇಶದಲ್ಲೂ ತಮ್ಮ ಆಳ್ವಿಕೆಯ ಮೂಲಕ ಇಡೀ ಪ್ರಪಂಚವನ್ನೇ ತನ್ನ ಅಧೀನದಲ್ಲಿ ಇಟ್ಟುಕೊಳ್ಳುವುದಾಗಿತ್ತು. ಮೈಸೂರು ಸಂಸ್ಥಾನವನ್ನು ಒಂದು ಮಾದರಿ ಸಂಸ್ಥಾನವನ್ನಾಗಿಸುವ ದಿಸೆಯಲ್ಲಿ ಪ್ರಯತ್ನಿಸಿತು. ಮಾದರಿ ಸಂಸ್ಥಾನ ಎಂಬ ಹೆಸರನ್ನಿಟ್ಟು ಇಲ್ಲಿನ ರಾಜಪ್ರಭುತ್ವವನ್ನು ಹಾಗೂ ಜನರನ್ನು ಸಂತುಷ್ಟಗೊಳಿಸಿತು. ಆದರೆ ಮಾದರಿ ಎಂಬ ಕಲ್ಪನೆ ಬ್ರಿಟಿಷ್ ಕಲ್ಪನೆಯಾಗಿತ್ತೇ ಹೊರತು, ಅದು ಸಂಸ್ಥಾನಕ್ಕೆ ಹೊಂದಿಕೊಳ್ಳುವಂತಿರಲಿಲ್ಲ. ವಸಾಹತುಶಾಹಿಯನ್ನು ಟಿಪ್ಪು ಮತ್ತು ಹೈದರರು ವಿರೋಧಿಸಿದ ಪರಿಣಾಮ ಟಿಪ್ಪುವಿನ ಮರಣದ ನಂತರ ಸಂಸ್ಥಾನ ಪೂರ್ಣ ಬ್ರಿಟಿಷರ ಕೈಸೇರಿತು. ಆಗ ಹಿಂದಿನ ಆಡಳಿತ ಪದ್ಧತಿಯಲ್ಲಿ ಅನೇಕ ಬದಲಾವಣೆಗಳನ್ನು ತಂದು ಅವರ ಸ್ವಾರ್ಥಕ್ಕೆ ಬೇಕಾದಂತಹ ಆಡಳಿತವನ್ನು ಹಾಗೂ ಆಡಳಿತ ಪದ್ಧತಿಗೆ ಒಪ್ಪಿಗೆ ಇತ್ತರು. ಮೈಸೂರು ಸಂಸ್ಥಾನ ವಸಾಹತುವಾಗಿ ಯಾವ ರೀತಿ ಬೆಳವಣಿಗೆ ಹೊಂದಿತು ಎನ್ನುವುದರ ಸಂಕ್ಷಿಪ್ತ ಅಧ್ಯಯನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಅಧ್ಯಾಯ ಮೂರರಲ್ಲಿ**, ಪ್ರಜಾಪ್ರತಿನಿಧಿ ಸಭೆಯನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಪ್ರಜೆಗಳ ನೇತೃತ್ವದಲ್ಲಿ ನಡೆಯುವ ಸಭೆ ಪ್ರಜಾಪ್ರತಿನಿಧಿ ಸಭೆಯಾಗುತ್ತದೆ. ಆದರೆ ಈ ಸಭೆಯಲ್ಲಿ ಮಹಾರಾಜ ಹಾಗೂ ದಿವಾನರು ಮುಖ್ಯರಾಗಿದ್ದರು. ಈ ಸಭೆಯನ್ನು ಪ್ರಜೆಗಳು ಹಾಗೂ ಮಹಾರಾಜರು ಒಂದೇ ವೇದಿಕೆಯಲ್ಲಿ ಸೇರಲು ಸ್ಥಾಪಿಸಿದರು. ಇಲ್ಲಿ ಯಾವ ಪ್ರಶ್ನೆಗಳನ್ನು ಕೇಳುವ ಅಧಿಕಾರವಿರಲಿಲ್ಲ. ಇದರ ಸ್ಥಾಪನೆಗೆ ಬ್ರಿಟಿಷರ ಒಪ್ಪಿಗೆ ಇತ್ತು. ಇದರ ಒಳಸಂಚು ಏನು ಎಂಬುದು ಸಂಸ್ಥಾನಿ ಜನರಿಗೆ ಕಾಲಾಂತರದಲ್ಲಿ ಅರಿವಾಯಿತು. ಪ್ರಜೆಗಳು ಎಲ್ಲಾ ತರಹದ ಮಾನವನ ಹಕ್ಕುಗಳನ್ನು ಪಡೆದುಕೊಳ್ಳಲು ಹವಣಿಸಿದರು. ಕೊನೆಗೆ ಈ ಸಭೆಯನ್ನು ಬ್ರಿಟಿಷರ ಒಪ್ಪಿಗೆ ಪಡೆದು ಸ್ಥಾಪಿಸಿದ ರಾಜರು ಮತ್ತು ದಿವಾನರಿಗೆ ಈ ಸಭೆ ಕಠಿಣವಾಗಿ ಕಾಡತೊಡಗಿತು. ಈ ಸಭೆಯಲ್ಲಿ ಎಲ್ಲಾ ವರ್ಗದ ಜನರು ಸೇರತೊಡಗಿದರು. ಆಗ ಅವರು ಜವಾಬ್ದಾರಿ ಸರ್ಕಾರ ಸ್ಥಾಪನೆಯ ಬಗ್ಗೆ, ಚಳವಳಿಯ ಪೂರ್ವ ಸಿದ್ಧತೆಯ ಕುರಿತು ತೀಕ್ಷ್ಣವಾದ ಮಾತುಗಳನ್ನು ಆರಂಭಿಸಿದರು. ಈ ಸಭೆಯಿಂದ ಮೈಸೂರು ಸಂಸ್ಥಾನಿಗರಿಗೆ ಆದ ಅನುಕೂಲಕರ ಬೆಳವಣಿಗೆಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ನಾಲ್ಕರಲ್ಲಿ,** ಮೈಸೂರು ಚಲೋ ಚಳವಳಿಯ ಸ್ವರೂಪದ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಬ್ರಿಟಿಷ್ ಪ್ರಭುತ್ವವಿದ್ದಾಗಲೆ ಜವಾಬ್ದಾರಿ ಸರ್ಕಾರ ಸ್ಥಾಪನೆ ಮಾಡಬೇಕೆಂದು ಮೈಸೂರಿನ ಜನತೆ ಹಂಬಲಿಸುತ್ತಿದ್ದರು. ಕೊನೆಗೆ ಬ್ರಿಟಿಷರು ಹೋದ ಮೇಲೆ ರಾಜಪ್ರಭುತ್ವವು ಸಹ, ಜನಪ್ರಭುತ್ವಕ್ಕೆ ಅವಕಾಶ ಕೊಡಲಿಲ್ಲ. ಭಾರತದ ಕಾಂಗ್ರೆಸ್‌ನ ಅಧೀನದಲ್ಲಿ ಸಂಸ್ಥಾನಿ ಕಾಂಗ್ರೆಸ್ ಕಾರ್ಯಾಚರಣೆ ಮಾಡತೊಡಗಿತು. ನಂತರ ಸ್ವತಂತ್ರ ಮೈಸೂರು ಕಾಂಗ್ರೆಸ್ ಆಗಿ ಜವಾಬ್ದಾರಿ ಸರ್ಕಾರದ ಹೊಣೆಯನ್ನು ಹೊತ್ತುಕೊಂಡು, ಎಲ್ಲಾ ಸಮುದಾಯದ ಜನರನ್ನು ಚಳವಳಿಗೆ ಉತ್ತೇಜಿಸಿತು. ಆ ಸಮಯದಲ್ಲಿ ಪತ್ರಿಕಾ ಶಾಸನ ನಿಷೇದಾಜ್ಞೆ ಇದ್ದರೂ ಸಹ ಅನೇಕ ರೀತಿಯ ಪತ್ರಿಕೆಗಳು ಜನರನ್ನು ಒಗ್ಗೂಡಿಸಲು ಹಾಗೂ ಚಳವಳಿಯ ವರದಿಯನ್ನು ಜನರಿಗೆ ಮುಟ್ಟಿಸಲು ಸಹಕಾರಿಯಾದವು. ಭಾರತದ ಸ್ವಾತಂತ್ರ್ಯದ ನಂತರ ನಡೆದ ಈ ಚಳವಳಿಯಲ್ಲಿ ಸಂಸ್ಥಾನಿಕರಲ್ಲದೆ ಬೇರೆ ಪ್ರದೇಶದ ಜನರೆಲ್ಲರೂ ಸೇರಿದ್ದರು. ಅನೇಕ ನಾಯಕರು ಈ ಚಳವಳಿಯ ಬಗ್ಗೆ ಜನರಲ್ಲಿ ಮನವರಿಕೆ ಮಾಡಿದರು. ಚಳವಳಿಯು ಸಂಸ್ಥಾನದ ೮ ಜಿಲ್ಲೆಗಳಲ್ಲಿಯೂ ವ್ಯಾಪಕವಾಗಿ ಹರಡಿತು. ಎಲ್ಲಾ ಕಡೆಗಳಿಂದಲೂ ಉತ್ತಮ ಪ್ರತಿಕ್ರಿಯೆ ಬಂದಿತು. ಈ ಚಳವಳಿಯನ್ನು ಚುರುಕುಗೊಳಿಸಿದ ರೀತಿ, ರೈತರು, ಕಾರ್ಮಿಕರು, ಮಹಿಳೆಯರು ಹೋರಾಟ ನಡೆಸಿದ ಬಗೆಯನ್ನು ಹಾಗೂ ಈ ಚಳವಳಿಗೆ ರಾಷ್ಟ್ರನಾಯಕರಾದ ಗಾಂಧೀಜಿ, ನೆಹರು, ವಲ್ಲಭಭಾಯಿ ಪಟೇಲ್ ಇತ್ಯಾದಿಯವರು ನೀಡಿದ ಬೆಂಬಲ ಹಾಗೂ ಈ ಚಳವಳಿ ಸಂಸ್ಥಾನದ ಮೇಲೆ ಬೀರಿದ ಪರಿಣಾಮ ಈ ಎಲ್ಲಾ ವಿಚಾರಗಳನ್ನು ಇಲ್ಲಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ.

**ಅಧ್ಯಾಯ ಐದರಲ್ಲಿ**, ಜವಾಬ್ದಾರಿ ಸರ್ಕಾರ ಸ್ಥಾಪನೆ ಕುರಿತು ಚರ್ಚೆನಡೆಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ನಡೆದ ಮೈಸೂರು ಚಲೋ ಚಳವಳಿಯು ಪ್ರಬಲವಾಗಿದ್ದು, ಮಹಾರಾಜರು ಜವಾಬ್ದಾರಿ ಸರ್ಕಾರ ರಚನೆಗೆ ಅವಕಾಶ ಕಲ್ಪಿಸಿಕೊಟ್ಟರು. ರಾಜಪ್ರಭುತ್ವವನ್ನು ಧಿಕ್ಕರಿಸಿ ನಡೆದ ಹೋರಾಟವು ಕೊನೆಗೆ ಪ್ರಜಾಪ್ರಭುತ್ವವನ್ನು ಪಡೆದುಕೊಂಡಿತು. ಇದರ ಮೂಲಕ ರಾಜರು ನಾಮಕಾವಸ್ಥೆಯಾಗಿ, ದಿವಾನರ ಪದವಿ ತಕ್ಷಣಕ್ಕೆ ರದ್ದುಗೊಳ್ಳಲಿಲ್ಲ. ಕೆ.ಸಿ. ರೆಡ್ಡಿಯವರ ನೇತೃತ್ವದಲ್ಲಿ ಈ ಚಳವಳಿ ರೂಪುಗೊಂಡಿತು. ಇವರು ಚಳವಳಿಯ ರೂವಾರಿಯಾಗಿ ಕೊನೆಗೆ ಮಂತ್ರಿಮಂಡಲವನ್ನು ರಚಿಸಿ ಮುಖ್ಯಮಂತ್ರಿಗಳಾದರು. ಆ ಸಂದರ್ಭದಲ್ಲಿ ಕೆ.ಸಿ. ರೆಡ್ಡಿಯವರು ಅನೇಕ ಸಮಸ್ಯೆಗಳು ಹಾಗೂ ಸವಾಲುಗಳನ್ನು ಎದುರಿಸಬೇಕಾಯಿತು. ವರ್ಗಪ್ರಾತಿನಿಧ್ಯ, ರಾಜ್ಯಾಂಗ ಸಭೆ ರಚನೆ, ಭಾಷಾವಾರು ಪ್ರಾಂತ್ಯ ರಚನೆ, ಕನ್ನಡಿಗರನ್ನು ಒಂದುಗೂಡಿಸುವುದು, ರಾಜ್ಯದ ಏಳಿಗೆಗೆ ಸಹಕಾರಿಯಾಗುವ ಅಂಶಗಳು ಮುಂತಾದ ವಿಚಾರಗಳನ್ನು ಚರ್ಚಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಕೊನೆಯ ಅಧ್ಯಾಯದಲ್ಲಿ**, ಒಟ್ಟಾರೆಯಾಗಿ ಈ ಅಧ್ಯಯದಲ್ಲಿ ಕಂಡುಕೊಂಡ ವಿಚಾರಗಳನ್ನು ಮಂಡಿಸಲಾಗಿದೆ. ಸಂಸ್ಥಾನಿ ಕಾಂಗ್ರೆಸ್ ಸ್ಥಾಪನೆಯ ನಂತರ ಚಳವಳಿಯನ್ನು ಚುರುಕುಗೊಳಿಸಿದ ರೀತಿ ಹಾಗೂ ಎಲ್ಲಾ ಸಮುದಾಯದವರನ್ನು ಚಳವಳಿಗೆ ಅಣಿಗೊಳಿಸಿದ ಕಾರ್ಯ, ಇದಕ್ಕೆ ಮೈಸೂರು ಸಂಸ್ಥಾನದ ಅಂದರೆ ರಾಜಪ್ರಭುತ್ವದ ಪ್ರತಿಕ್ರಿಯೆಗಳು ಈ ಮುಂತಾದ ವಿಚಾರಗಳನ್ನು ಸೂಕ್ಷ್ಮವಾಗಿ ಚರ್ಚಿಸಲಾಗಿದೆ.

## ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಶೀರ್ಷಿಕೆಯನ್ವಯ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸಲುವಾಗಿ ನಡೆದ ಹೋರಾಟದ ದಿನಗಳು ಹಾಗೂ ಆಗಿನ ಮೈಸೂರು ಸಂಸ್ಥಾನದಲ್ಲಿನ ೮ ಜಿಲ್ಲೆಗಳಾದ ಮೈಸೂರು, ಬೆಂಗಳೂರು, ಕೋಲಾರ, ತುಮಕೂರು, ಹಾಸನ, ಕಡೂರು, ಶಿವಮೊಗ್ಗ ಮತ್ತು ಚಿತ್ರದುರ್ಗದಲ್ಲಿನ ಹೋರಾಟದ ಪ್ರಸರಣ ಮತ್ತು ಪ್ರತಿಕ್ರಿಯೆಯು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ. ರಾಜಪ್ರಭುತ್ವವನ್ನು ಮಟ್ಟಹಾಕಲು ಕೈಗೊಂಡ ಚಳವಳಿಯಲ್ಲಿ ಸಂಸ್ಥಾನದ ಜನತೆಯ ಹೋರಾಟದ ಸ್ವರೂಪ ಮತ್ತು ವಿವಿಧ ಹಂತಗಳನ್ನು ಗುರುತಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ಕೊನೆಟಿಪ್ಪಣಿಗಳು

೧. ಶಾಮರಾವ್ ಎಂ., **ಮಾರ್ಡನ್ ಮೈಸೂರು**, ೧೯೩೬

೨. ಮುಜುಂದಾರ್ ಆರ್.ಸಿ (ಅನು.), **ಸ್ವಾತಂತ್ರ್ಯ ಸಂಗ್ರಾಮ**, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮

೩. ಹಯವದನ್ ರಾವ್ ಸಿ., **ಮೈಸೂರು ಗೆಜೆಟಿಯರ್**, ಸಂಪುಟಗಳು, ಬೆಂಗಳೂರು, ೧೯೩೦

೪. ವೀರತಪ್ಪ ಕೆ., **ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ**, ಬೆಂಗಳೂರು, ೧೯೭೭

೫. ದೊರೆಸ್ವಾಮಿ ಎಚ್.ಎಸ್., **ಹೋರಾಟದ ದಿಟ್ಟ ಹೆಜ್ಜೆಗಳು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೬. ಚಂದ್ರಶೇಖರ್ ಎಸ್.,**ಆಧುನಿಕ ಕರ್ನಾಟಕದ ಆಂದೋಲನಗಳು**, ನಮ್ಮ ಪ್ರಕಾಶನ, ಬಿಳಿಗೆರೆ, ೨೦೦೨

೭. ಚಂದ್ರಶೇಖರ್ ಎಸ್., **ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು ೧೮೮೧–೧೯೪೦**, ಬೆಂಗಳೂರು, ೧೯೮೩

೮. ಹಾಲಪ್ಪ ಜಿ.ಎಸ್.,(ಸಂ.), **ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ**, ಸಂಪುಟ – ೧,೨, ಬೆಂಗಳೂರು, ೧೯೬೨, ೧೯೬೪

೯. ಬೋರ್ನ್ ಹೆಟ್ನೆ., **ದಿ ಪೊಲಿಟಿಕಲ್ ಎಕನಮಿ ಆಫ್ ಇನ್‌ಡೈರೆಕ್ಟ್ ರೂಲ್ ಮೈಸೂರು ೧೮೮೧–೧೯೪೭**, ಅಂಬಿಕ ಪಬ್ಲಿಕೇಷನ್, ನವದೆಹಲಿ, ೧೯೭೮

೧೦. ಜೇಮ್ಸ್ ಮೇನರ್., **ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು ೧೯೧೭–೧೯೫೫**, ನವದೆಹಲಿ, ೧೯೭೭

೧೧. ಸೂರ್ಯನಾಥ್ ಕಾಮತ್., **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂಪುಟ – ೧,೨,೩, ಗೀತಾ ಬುಕ್‌ಹೌಸ್, ಮೈಸೂರು, ೧೯೭೪, ೧೯೭೭, ೧೯೮೦

೧೨. ಚಂದ್ರಶೇಖರ್ ಎಸ್., **ದಕ್ಷಿಣ ಭಾರತ: ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೩. ಎನ್.ಪಿ. ಶಂಕರನಾರಾಯಣ ರಾವ್., **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು**, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೧

೧೪. ಹಂಡ ಆರ್.ಎಲ್., **ಹಿಸ್ಟರಿ ಆಫ್ ಫ್ರೀಡಮ್ ಸ್ಟ್ರಗಲ್ ಇನ್ ಪ್ರಿನ್ಸ್‌ಲಿ ಸ್ಟೇಟ್**, ನವದೆಹಲಿ, ೧೯೬೮

೧೫. ಶಾಮರಾವ್ ಎಮ್., **ಮಾರ್ಡನ್ ಮೈಸೂರು**, ಹಿಗ್ಗಿನ್ಸ್ ಬಾಥಮ್ಸ್, ಬೆಂಗಳೂರು, ೧೯೩೬

೧೬. ಚಂದ್ರಶೇಖರ್ ಎಸ್., **ಕರ್ನಾಟಕ ಚರಿತ್ರೆ ಸಂಪುಟ – ೭**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

* * *

ಅಧ್ಯಾಯ – ೨

# ವಸಾಹತು ಮೈಸೂರು

೨.೧ ವಸಾಹತುಶಾಹಿ ಪ್ರವೇಶ, ಹಿತಾಸಕ್ತಿ ಮತ್ತು ಧೋರಣೆಗಳು

೨.೨ ಮಾದರಿ ಸಂಸ್ಥಾನವಾಗಿ ಮೈಸೂರು

೨.೩ ಸಂಸ್ಥಾನದ ಆಡಳಿತ ಸ್ವರೂಪ

ಅಧ್ಯಾಯ ೨

# ವಸಾಹತು ಮೈಸೂರು

## ೨.೧ ವಸಾಹತುಶಾಹಿ ಪ್ರವೇಶ, ಹಿತಾಸಕ್ತಿ, ಧೋರಣೆಗಳು

ಭಾರತವು ಸುಮಾರು ೨೦೦ ವರ್ಷಗಳ ಕಾಲ ವಸಾಹತು ಆಳ್ವಿಕೆಗೆ ನೇರವಾಗಿ ಒಳಪಟ್ಟು ನಿರಂತರವಾಗಿ, ವ್ಯವಸ್ಥಿತವಾಗಿ, ಯೋಜಿತವಾದ ಶೋಷಣೆಗೆ ಒಳಪಟ್ಟಿತಲ್ಲದೇ ಭಾರತದ ರಾಜಕೀಯ ಸಾಮಾಜಿಕ ಮತ್ತು ಆರ್ಥಿಕ ಜೀವನ ಕ್ರಮದ ಮೇಲೆ ಬ್ರಿಟಿಷರ ಆಳ್ವಿಕೆ ದುಷ್ಪರಿಣಾಮಗಳನ್ನು ಉಂಟುಮಾಡಿತು. ಮೊಗಲ್ ಸಾಮ್ರಾಟರು ಕರಾವಳಿಯ ರಕ್ಷಣೆಗೆ ಆಧ್ಯತೆ ನೀಡದಿದ್ದರಿಂದ ಸಮುದ್ರಮಾರ್ಗದ ಮೂಲಕ ಯುರೋಪಿನ ವ್ಯಾಪಾರಿ ರಾಷ್ಟ್ರಗಳು ಭಾರತಕ್ಕೆ ಆಗಮಿಸಿದವು. ಆ ರೀತಿ ಆಗಮಿಸಿದ ವಿದೇಶಿ ವರ್ತಕರು ನಮ್ಮ ದೇಶದ ಚರಿತ್ರೆಗೆ ಒಂದು ಹೊಸ ತಿರುವನ್ನಿತ್ತರು. ಯುರೋಪಿನ ಜನಗಳಿಂದ ಪೂರ್ವದೇಶಗಳ ಸಾಂಬಾರ ಪದಾರ್ಥಗಳಿಗೆ ಯಥೇಚ್ಛ ಬೇಡಿಕೆ ಇದ್ದುದರಿಂದ ಕ್ರಿ.ಶ. ೧೫೦೦ರಲ್ಲಿ ಈ ವ್ಯಾಪಾರವು ಅತ್ಯಂತ ಲಾಭದಾಯಕವಾಗಿತ್ತು. ಕ್ರಿ.ಶ. ೧೫ನೇ ಶತಮಾನದ ಉತ್ತರಾರ್ಧದಲ್ಲಿ ಬಲಿಷ್ಠವಾದ ಸಾಮ್ರಾಜ್ಯಗಳು, ಕೇಂದ್ರಿಕೃತ ರಾಜ್ಯಗಳು ಉದಯವಾಗಿದ್ದರಿಂದ ಯುರೋಪಿನ ಆರ್ಥಿಕ ಏಕಸ್ವಾಮ್ಯಕ್ಕೆ ದಕ್ಕೆ ಬಂದಿತು. ಕ್ರಿ.ಶ. ೧೭ ಮತ್ತು ೧೮ನೇ ಶತಮಾನಗಳಲ್ಲಿ ಆದ ವ್ಯಾಪಾರಿ ಕ್ರಾಂತಿ ಯುರೋಪಿನ ಮಾರುಕಟ್ಟೆಯಲ್ಲಿ ಬಾರೀ ಪ್ರಮಾಣದಲ್ಲಿ ವಿಸ್ತರಿಸಿದಲ್ಲದೆ ಹಣ ಆಧಾರಿತ ಆರ್ಥಿಕತೆಯನ್ನು ಜಾರಿಗೆ ತಂದಿತು. ೧೫ನೇ ಶತಮಾನಗಳವರೆಗೆ ವರ್ತಕರು ಒಬ್ಬಬ್ಬರೇ ವ್ಯಾಪಾರ ನಡೆಸುತ್ತಿದ್ದರು. ಆದರೆ ದೊಡ್ಡ ವ್ಯಾಪಾರ ವಹಿವಾಟು ನಡೆಸಲು ಬಹಳ ಬಂಡವಾಳ ಬೇಕಾಗಿದ್ದರಿಂದ, ರೆಗ್ಯುಲೇಟೆಡ್ ಕಂಪನಿಗಳು ಜಾಯಿಂಟ್ ಸ್ಟಾಕ್ ಕಂಪನಿಗಳು ನಂತರ ಚಾರ್ಟ್‌ಡ್ ಕಂಪನಿಗಳು ಆರಂಭವಾದವು.[೧] ಇವುಗಳನ್ನು ಸರ್ಕಾರವೇ ಅಧಿಕೃತವಾಗಿ ಅಂಗೀಕರಿಸಬೇಕಿತ್ತು. ಪೂರ್ವದೇಶಗಳ ವ್ಯಾಪಾರವನ್ನು ತಮ್ಮ ವಶದಲ್ಲಿಟ್ಟುಕೊಳ್ಳಲು ಹಲವಾರು ಕಂಪನಿಗಳನ್ನು ಆರಂಭಿಸಲಾಯಿತು. ಅವುಗಳೆಂದರೆ ೧೬೦೦ರಲ್ಲಿ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿ, ೧೬೦೨ರಲ್ಲಿ ಡಚ್ಚ್ ಈಸ್ಟ್ ಇಂಡಿಯಾ ಕಂಪನಿ ಮತ್ತು ೧೬೬೪ರಲ್ಲಿ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಗಳು.

ಮೊದಲಿಗೆ ಭಾರತಕ್ಕೆ ಆಗಮಿಸಿದ ಯುರೋಪಿಯನ್ನರೆಂದರೆ ಪೋರ್ಚುಗೀಸರು. ಇವರು ಕಲ್ಲಿಕೋಟೆ ಮೂಲಕ ಭಾರತದ ಕರಾವಳಿ ಪ್ರದೇಶಕ್ಕೆ ಬಂದಿಳಿದರು. ಪೋರ್ಚುಗೀಸರ ಗವರ್ನರ್ ಅಲ್ಬುಕರ್ಕ್‌ನು ತನ್ನ ರಾಯಭಾರಿ ಥಾಮಸ್ ರೋನನ್ನು ಮೊಘಲರ ಜಹಾಂಗೀರನ ಆಸ್ಥಾನಕ್ಕೆ ಕಳುಹಿಸಿ, ಗುಜರಾತ್, ಬಾಂಬೆ, ಗೋವಾ, ಮುಂತಾದ ಸ್ಥಳಗಳಲ್ಲಿ ವ್ಯಾಪಾರ ಕೋಠಿಗಳನ್ನು ಸ್ಥಾಪಿಸಲು ಅನುಮತಿ ಪಡೆದನು. ಪೋರ್ಚುಗೀಸರ ನಂತರ ಭಾರತಕ್ಕೆ ಆಗಮಿಸಿದ ಡಚ್ಚರು ೧೬೦೨ರಲ್ಲಿ ಡಚ್ ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದರು. ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆ ನಿಜಾರ್ಥದಲ್ಲಿ ರೂಪುಗೊಳ್ಳುವುದಕ್ಕೆ ಕಾರಣರಾದ ಬ್ರಿಟಿಷರು ಈಸ್ಟ್ ಇಂಡಿಯಾ ಕಂಪನಿಯನ್ನು ಕ್ರಿ.ಶ. ೧೬೦೦, ಡಿಸೆಂಬರ್ ೩೧ರಂದು ಸ್ಥಾಪಿಸಿ, ಇದು ೧೫ ವರ್ಷಗಳ ಕಾಲ ಪ್ರಾಚ್ಯ ವಾಣಿಜ್ಯದಲ್ಲಿ ಸ್ವಾಮ್ಯ ಪಡೆಯುವ ಸನ್ನದನ್ನು ಎಲಿಜಬೆತ್ ರಾಣಿಯಿಂದ ಪಡೆಯಿತು.[೨] ಭಾರತದಲ್ಲಿ ವ್ಯಾಪಾರ ಮಾಡಲು ಸೂರತ್‌ನಲ್ಲಿ ವ್ಯಾಪಾರಿ ಕೋಠಿಯನ್ನು ಸ್ಥಾಪಿಸಿದರು. ಕ್ರಮೇಣ ಇವರು ಭಾರತದಲ್ಲಿದ್ದ ರಾಜಕೀಯ ಅಸ್ಥಿರತೆ ಹಾಗೂ ಆಂತರಿಕ ಗೊಂದಲಗಳನ್ನು ಮನಗಂಡು ರಾಜಕೀಯ ಹಾಗೂ ಸಾಮ್ರಾಜ್ಯಶಾಹಿ ಮನೋಭಾವವನ್ನು ಬೆಳೆಸಿಕೊಂಡರು.

ಕ್ರಿ.ಶ. ೧೭೦೦ರ ವೇಳೆಗೆ ಹಾಲೆಂಡ್, ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳು ಯುರೋಪಿನ ಪ್ರಮುಖ ಶಕ್ತಿಗಳಾಗಿದ್ದವು. ಆದರೆ ೧೮ನೇ ಶತಮಾನದಲ್ಲಿ ಇವೆಲ್ಲವೂ ಪರಸ್ಪರ ವಿರೋಧಿ ವಸಾಹತುಶಾಹಿ ಶಕ್ತಿಗಳಾಗಿ ಬೆಳೆದವು. ಬ್ರಿಟನ್ ತನ್ನ ಕೈಗಾರಿಕಾ ಕ್ರಾಂತ್ರಿಯ ಬಲದಿಂದ ೧೮ನೇ ಶತಮಾನದಲ್ಲಿ ಅತ್ಯಂತ ಬಲಿಷ್ಠ ರಾಷ್ಟ್ರವಾಗಿ ಉದಯವಾಯಿತು.

ಔರಂಗಜೇಬನ ಅವಧಿಯಲ್ಲಿ ಮೊಗಲರು ಹಾಗೂ ಕಂಪನಿಯ ಸಂಬಂಧಗಳಲ್ಲಿ ಕೆಲವು ಬದಲಾವಣೆಗಳಾಗುತ್ತಿದ್ದವು. ಈ ವೇಳೆಗೆ ಬ್ರಿಟಿಷರು ಮದ್ರಾಸ್ ಹಾಗೂ ಬಾಂಬೆಯ ವಸಾಹತುಗಳ ದೆಸೆಯಿಂದ ಹೆಚ್ಚು ಪ್ರಾಬಲ್ಯಗಳಿಸಿದ್ದರು. ಔರಂಗಜೇಬನು ಮರಾಠರ ವಿರುದ್ಧದ ಆಂದೋಲನದಲ್ಲಿ ಸಕ್ರಿಯವಾಗಿದ್ದನು. ಆದ್ದರಿಂದ ಬ್ರಿಟಿಷರು ಬರೀ ಬೇಡಿಕೆಗಳನ್ನು ಸಲ್ಲಿಸುವ ತಮ್ಮ ನಿಲುವನ್ನು ಬದಲಾಯಿಸಿಕೊಳ್ಳಬೇಕಾಯಿತು. ತಮ್ಮ ಬಲದ ಸಹಾಯದಿಂದ ಅವರು ಬೆಲೆಗಳನ್ನು ನಿಯಂತ್ರಿಸುವುದಲ್ಲದೇ, ವ್ಯಾಪಾರದಲ್ಲಿ ಯಾವುದೇ ತೊಂದರೆಗಳಿಲ್ಲದೆ ತೊಡಗಿಸಿಕೊಳ್ಳಬೇಕಾಗಿತ್ತು. ಅವರು ಭಾರತದಲ್ಲಿ ತಮ್ಮ ವ್ಯಾಪಾರಕ್ಕೆ ಮೊಘಲರಿಂದಲೂ ಯಾವ ತಡೆ ಉಂಟಾಗದ ಭಾರತದ ವಸ್ತುಗಳನ್ನು ಅಗ್ಗದ ಬೆಲೆಯಲ್ಲಿ ಕೊಂಡು ಹೆಚ್ಚಿನ ಬೆಲೆಗೆ ಮಾರುವಂಥ, ತಮ್ಮ ವಿರುದ್ಧ ಇದ್ದ ಬೇರೆ ಯುರೋಪಿನ ವರ್ತಕರನ್ನು ಬದಿಗೊತ್ತುವಂಥ ಮತ್ತು ತಮ್ಮ ವ್ಯಾಪಾರಕ್ಕೆ ಭಾರತದ ಯಾವುದೇ ನೀತಿನಿಯಮಗಳು ಅಡ್ಡಿ ಬರದಂತಹ ಒಂದು ಬಲಿಷ್ಠ ರಾಜಕೀಯ ಶಕ್ತಿಯನ್ನು ಕಟ್ಟುವ ಕನಸನ್ನು ಕಾಣತೊಡಗಿದರು. ಈ ರಾಜಕೀಯ ಶಕ್ತಿಯಿಂದ ಅವರು ಭಾರತದ ಆದಾಯದ ಮೂಲಗಳನ್ನು ತಮ್ಮ ನಿಯಂತ್ರಣಕ್ಕೆ

ತರಬಹುದಾಗಿತ್ತು. ಔರಂಗಜೇಬನ ಮರಣದ ನಂತರ ಅಧಿಕಾರ ವಿಕೇಂದ್ರಿಕರಣವಾಗಿ ಹಲವಾರು ಸಣ್ಣಮಟ್ಟ ರಾಜ್ಯಗಳು ತಲೆಯೆತ್ತಿದವು. ಆಗ ಇಂಗ್ಲಿಷರು ಹಾಗೂ ಫ್ರೆಂಚರು ತಮ್ಮ ರಾಜಕೀಯ ಹಾಗೂ ಭೌಗೋಳಿಕ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ಹಾತೊರೆದರು.

ಬ್ರಿಟಿಷರು ರಾಬರ್ಟ್ ಕ್ಲೈವ್‌ನ ನೇತೃತ್ವದಲ್ಲಿ ಅನೇಕ ಪ್ರದೇಶಗಳ ಮೇಲೆ ಆಕ್ರಮಣ ಮಾಡಿ ಭಾರತದಲ್ಲಿ ಬ್ರಿಟಿಷ್ ಪ್ರಭುತ್ವವನ್ನು ಸ್ಥಾಪಿಸತೊಡಗಿದರು. ೧೭೫೭ರ ಪ್ಲಾಸಿ ಕದನದ ನಂತರ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ಬಂಗಾಳದ ಮೇಲೆ ತನ್ನ ನಿಯಂತ್ರಣ ವಿಸ್ತರಿಸಿದ ನಂತರ ಬ್ರಿಟಿಷ್ ಅಧಿಕಾರದ ವ್ಯಾಪ್ತಿ ವ್ಯಾಪಕವಾಯಿತು. ಅದೇ ರೀತಿ ೧೭೬೪ರ ಬಕ್ಸಾರ್ ಕದನವು ನಿರ್ಣಾಯಕವಾದುದಾಗಿದೆ. ನಂತರ ಫ್ರೆಂಚರಿಗೂ ಹಾಗೂ ಬ್ರಿಟಿಷರಿಗೂ ನಡೆದ ಮೂರು ಕರ್ನಾಟಿಕ್ ಯುದ್ಧಗಳಲ್ಲಿ ಬ್ರಿಟಿಷರು ವಿಜಯಿಗಳಾಗಿ ದಕ್ಷಿಣ ಭಾರತವನ್ನು ಬ್ರಿಟಿಷ್ ಪ್ರಭುತ್ವಕ್ಕೆ ಸೇರಿಸಿಕೊಂಡರು. ಕೊನೆಗೆ ಬ್ರಿಟಿಷ್ ವಸಾಹತುಶಾಹಿ ಮುಂದೆ ಎಲ್ಲಾ ಯುರೋಪಿಯನ್ ವಸಾಹತುಶಾಹಿಗಳು ದಮನ ಹೊಂದಿದರು. ಹಾಗೂ ವಸಾಹತುಶಾಹಿಯಾಗಿ ಬಂದ ಬ್ರಿಟಿಷರು ಸಾಮ್ರಾಜ್ಯ ವಿಸ್ತರಣೆಯ ಕಡೆ ಗಮನಹರಿಸಿದರು.

ಸಾಮಾನ್ಯವಾಗಿ ವಸಾಹತುಶಾಹಿ ಎಂದರೆ ಆರ್ಥಿಕವಾಗಿ ಹಾಗೂ ಸೈನಿಕವಾಗಿ ಪ್ರಬಲವಾದ ರಾಷ್ಟ್ರವೊಂದು ಆರ್ಥಿಕವಾಗಿ ಹಾಗೂ ಸೈನಿಕವಾಗಿ ದುರ್ಬಲವಾದಂತಹ ರಾಷ್ಟ್ರದ ಮೇಲೆ ಹೊಂದಿರುವಂತಹ ಒಡೆತನ ಅಥವಾ ದಬ್ಬಾಳಿಕೆ. ಇಂತಹ ವಸಾಹತುಶಾಹಿ ನೀತಿ ಆಡಳಿತವು ಭಾರತದ ಮೇಲೆ ತನ್ನದೇ ಆದ ರೀತಿಯಲ್ಲಿ ಪ್ರಭಾವ ಬೀರಿತು. ಇಲ್ಲಿ ನೆಲೆಯೂರಿದ್ದ ಈಸ್ಟ್ ಇಂಡಿಯಾ ಕಂಪನಿಯ ಉದ್ದೇಶ ಕಡಿಮೆ ವೆಚ್ಚದಲ್ಲಿ ಹೆಚ್ಚು ಲಾಭಗಳಿಸುವುದಾಗಿತ್ತು. ಆದ್ದರಿಂದ ಕಂಪನಿಯು ತನ್ನ ಉದ್ದೇಶವನ್ನು ಸಾಧಿಸಿಕೊಳ್ಳಲು ದೇಶದ ವಿವಿಧ ಪ್ರಾಂತ್ಯಗಳನ್ನು ಹಂತಹಂತವಾಗಿ ಆಕ್ರಮಿಸುವ ಮೂಲಕ ರಾಜಕೀಯವಾಗಿಯೂ ದೇಶವನ್ನು ತನ್ನ ಹಿಡಿತಕ್ಕೆ ತೆಗೆದು ಕೊಂಡಿತಲ್ಲದೇ, ಆಕ್ರಮಿಸಿದಂತಹ ಪ್ರದೇಶಗಳ ಮೇಲೆ ನೇರ ಹಿಡಿತ ಸಾಧಿಸುವಲ್ಲಿಯೂ ಕೂಡ ಯಶಸ್ವಿಯಾಯಿತು.[೩]

ವಸಾಹತುಶಾಹಿ ಎನ್ನುವುದು ಆಧುನಿಕ ಯುರೋಪಿನ ಮಾರುಕಟ್ಟೆಯ ವಿಸ್ತರಣೆಯ ಮತ್ತು ಯುರೋಪಿನ ಅಧಿಕಾರ ವಿಸ್ತರಣೆಯ ಫಲ. ಯುರೋಪ್ ವಸಾಹತು ರಾಷ್ಟ್ರಗಳಲ್ಲಿ ಹೊಸ ರೀತಿಯ ಉತ್ಪಾದನೆಯ ಸಂಬಂಧಗಳನ್ನು ತನ್ನ ಅಗತ್ಯಕ್ಕೆ ತಕ್ಕಂತೆ ರೂಪಿಸಿತು. ಉತ್ಪಾದನೆಯ ವಿಧಿವಿಧಾನಗಳಲ್ಲಿ ಉಂಟಾದ ಪರಿವರ್ತನೆಯು ಸಮಾಜದ ಪಲ್ಲಟಕ್ಕೆ ಕಾರಣವಾಯಿತು. ವಸಾಹತು ದೇಶಗಳ ಪ್ರಾದೇಶಿಕ ಆಕ್ರಮಣವು ಕೇವಲ ಪ್ರಾದೇಶಿಕ ಆಕ್ರಮಣಕ್ಕೆ ಮಾತ್ರ ಕಾರಣವಾಗಿರದೆ, ಅದು ಮಾರುಕಟ್ಟೆಯ ವಿಸ್ತರಣೆಯ, ಸಾಂಸ್ಕೃತಿಕ ವಿಸ್ತರಣೆಯ ಅಂಶಗಳನ್ನು ಒಳಗೊಂಡಿತ್ತು.[೪] ವಸಾಹತುಶಾಹಿ ಎನ್ನುವುದು ಈ ಕಾರಣದಿಂದಲೆ ರಾಜಕೀಯ ಮತ್ತು ಆರ್ಥಿಕ ಪ್ರಭಾವಗಳಿಗೆ ಕಾರಣವಾಗಿರಲಿಲ್ಲ. ಅದು ವಸಾಹತು ದೇಶಗಳಲ್ಲಿ

ನಿರ್ದಿಷ್ಟ ತಾತ್ವಿಕತೆಯನ್ನು ರೂಪಿಸಲು ಕಾರಣವಾಯಿತು. ಸಾಮಾಜಿಕ ಪರಿವರ್ತನೆಯಲ್ಲಿ ಒಂದು ಪ್ರಮುಖ ಪಾತ್ರವನ್ನು ವಸಾಹತು ಆಡಳಿತವು ಜಾರಿಗೆ ತಂದಿತು.

ಮೊಗಲ್ ಸಾಮ್ರಾಜ್ಯದ ಪತನದ ನಂತರ ೧೮ನೇ ಶತಮಾನದಲ್ಲಿ ಮೈಸೂರು ಹಾಗೂ ಮರಾಠರಂಥ ಸಣ್ಣ ಸಣ್ಣ ಪ್ರಾದೇಶಿಕ ಶಕ್ತಿಗಳು ಅಸ್ತಿತ್ವಕ್ಕೆ ಬಂದವು.[೫] ಇದೇ ಸಂದರ್ಭದಲ್ಲಿ ಯುರೋಪಿನ ವಸಾಹತುಶಾಹಿ ಶಕ್ತಿಗಳು ಭಾರತೀಯ ಉಪಖಂಡದಲ್ಲಿ ಪ್ರವೇಶಿಸಿದವು. ಇದರಿಂದಾಗಿ ಸ್ಥಳೀಯ ರಾಜಕೀಯ ಶಕ್ತಿಗಳು ಹಾಗೂ ವಸಾಹತುಶಾಹಿ ಶಕ್ತಿಗಳ ನಡುವೆ ರಾಜಕೀಯ ಪ್ರಾಬಲ್ಯಕ್ಕೆ ಸೆಣಸಾಟ ಶುರುವಾಯಿತು. ಈ ಎರಡೂ ಶಕ್ತಿಗಳ ಕಾದಾಟದ ನಡುವೆ ಭಾರತದ ರಾಜರುಗಳಲ್ಲಿಯೇ ರಾಜಕೀಯ ಪರಮಾಧಿಕಾರಕ್ಕಾಗಿ ಹೋರಾಟ ಆರಂಭವಾಗಿತ್ತು. ಮೈಸೂರಿನ ನಿಜವಾದ ರಾಜ ನಾನೇ ಎಂದು ಘೋಷಿಸಿದ ಸೈನ್ಯಾಧಿಕಾರಿಯೊಬ್ಬ ಮರಾಠರಿಗೆ, ಕರ್ನಾಟಕದ ನವಾಬರಿಗೆ ಹಾಗೂ ಹೈದರಾಬಾದ್ ನಿಜಾಮನಿಗೆ ಸವಾಲಾಗಿ ಪರಿಣಮಿಸಿದ.[೬] ಮರಾಠರು ಹಾಗೂ ನಿಜಾಮರು ಇಬ್ಬರೂ ಸೇರಿ ಬ್ರಿಟಿಷರ ಸಹಯೋಗದೊಂದಿಗೆ ಮೈಸೂರಿನ ಸೈನ್ಯಾಧಿಕಾರಿಯ ವಿರುದ್ಧ ಹೋರಾಟ ನಡೆಸಿದರು. ಆದರೆ ನಿಜಾಮನಿಗೆ ದಕ್ಷಿಣದಲ್ಲಿ ಮರಾಠರು ಬೆಳೆಯುತ್ತಿದ್ದ ಪ್ರಾಬಲ್ಯದ ಬಗ್ಗೆ ಒಳಗೇ ಆತಂಕವಿದ್ದುದರಿಂದ ಅವನು ಮರಾಠರ ವಿರುದ್ಧ ಬ್ರಿಟಿಷರ ಜೊತೆ ಕೈಜೋಡಿಸಿದನು. ಈ ರೀತಿಯ ಪರಸ್ಪರ ಹಗೆತನ ಸ್ಥಳೀಯ ರಾಜರ ನಡುವೆ ಇದ್ದುದರಿಂದ ಬ್ರಿಟಿಷರಿಗೆ ಅವರ ಆಂತರಿಕ ವ್ಯವಹಾರಗಳಲ್ಲಿ ಮಧ್ಯ ಪ್ರವೇಶಿಸಲು ಅನುಕೂಲವಾಯಿತು. ಬ್ರಿಟಿಷರು ಮೈಸೂರು ಹಾಗೂ ಮರಾಠ ರಾಜ್ಯಗಳ ನಡುವೆ ಮಧ್ಯಪ್ರವೇಶಿಸಿದ್ದು ಮೂಲತಃ ವ್ಯಾಪಾರದ ಕಾರಣಗಳಿಗಾಗಿಯೇ. ಹೈದರ್ ಮತ್ತು ಟಿಪ್ಪು ಸುಲ್ತಾನ್ ಇಬ್ಬರೂ ಮಲಬಾರ್ ತೀರದ ವ್ಯಾಪಾರವನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು.[೭] ಅವರು ಮದ್ರಾಸಿನಲ್ಲಿ ಬ್ರಿಟಿಷರ ವ್ಯಾಪಾರಿ ಉದ್ದೇಶಗಳಿಗೆ ಆತಂಕಕಾರಿಯಾಗಿದ್ದರು.

ಯುರೋಪಿಯನ್ ಏಜೆಂಟರುಗಳಲ್ಲಿ ಅತ್ಯಂತ ಯಶಸ್ವಿಯಾದವರಾದ ಬ್ರಿಟಿಷರು ವ್ಯಾಪರ ಕಂಪನಿಗಳ ಹಿತಾಸಕ್ತಿಯಿಂದ, ರಾಜಕೀಯ ಶಕ್ತಿಯ ಹಿತಾಸಕ್ತಿಯ ಕಡೆಗೆ ಹೆಚ್ಚು ಒಲವನ್ನು ತೋರಿದರು. ದಕ್ಷಿಣದಲ್ಲಿ ಬ್ರಿಟಿಷರು ಮದರಾಸಿನಲ್ಲಿ ತಮ್ಮ ಕೇಂದ್ರ ನೆಲೆಯನ್ನು ಸ್ಥಾಪಿಸಿಕೊಂಡರು. ಮದ್ರಾಸ್ ಕೇಂದ್ರ ನೆಲೆಯ ಪ್ರಮುಖ ಉದ್ದೇಶ ವಾಣಿಜ್ಯವಾಗಿತ್ತು. ಆದರೆ ಕ್ರಮೇಣ ಅವರಲ್ಲಿ ರಾಜಕೀಯ ಆಸೆ ಬೆಳೆಯಿತು. ಆಗ ಎಲ್ಲ ಸ್ಥಳೀಯ ರಾಜರನ್ನು ಕಂಪನಿಯ ಆರ್ಥಿಕತೆಯ ಬೇಡಿಯಲ್ಲಿ ಬಂಧಿಸಿದರು. ನಂತರ ಬ್ರಿಟಿಷ್ ಅಧಿಕಾರಿಗಳು ಅನೇಕ ಒಳಸಂಚುಗಳನ್ನು ನಡೆಸಿ, ವ್ಯಾಪಾರದಿಂದ ಬರುತ್ತಿದ್ದ ಆದಾಯದ ಜೊತೆಗೆ ಭೂ ಆದಾಯಗಳನ್ನು ಅಂದರೆ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರು. ಆ ಸಮಯದಲ್ಲಿ ಮೈಸೂರು ಸಂಸ್ಥಾನದಲ್ಲಿನ ಒಡೆಯರ ಅರಾಜಕತೆಯಿಂದ ಹೈದರ್ ಮತ್ತು ಟಿಪ್ಪು

ಆಡಳಿತ ಚುಕ್ಕಾಣಿ ಹಿಡಿದಿದ್ದರು. ವಸಾಹತುಶಾಹಿಯ ದಬ್ಬಾಳಿಕೆಯ ಬಗ್ಗೆ ಪ್ರಬಲವಾಗಿ ವಿರೋಧಿಸಿದರು.[೮]

ಬ್ರಿಟಿಷರು ಮೈಸೂರು ರಾಜ್ಯದ ವಿರುದ್ಧ ನಾಲ್ಕು ಯುದ್ಧಗಳನ್ನು ನಡೆಸಿದರು. ಆ ಯುದ್ಧಗಳಲ್ಲಿ ಮರಾಠರು, ಕರ್ನಾಟಕದ ನವಾಬ ಹಾಗೂ ಹೈದರಾಬಾದಿನ ನಿಜಾಮ ಎಲ್ಲರೂ ಕಾಲಕಾಲಕ್ಕೆ ಬ್ರಿಟಿಷರೊಂದಿಗೆ ಸೇರಿ ಮೈಸೂರಿನ ಪ್ರಾಬಲ್ಯವನ್ನು ಅಡಗಿಸಲು ಯತ್ನ ನಡೆಸಿದರು. ಈ ಎಲ್ಲಾ ರಾಜ್ಯಗಳು ಆಗ ತಾನೇ ತಮ್ಮ ಪ್ರದೇಶಗಳನ್ನು ವಿಸ್ತರಿಸುತ್ತಿದ್ದುದರಿಂದ ಮೈಸೂರು ಏಳಿಗೆಗೆ ಬರುತ್ತಿದ್ದುದನ್ನು ಕಂಡು ಆತಂಕಕ್ಕೊಳಗಾದರು. ಬ್ರಿಟಿಷರು ಟಿಪ್ಪುವನ್ನು ದಕ್ಷಿಣದ ಪ್ರಬಲ ವೈರಿ ಎಂದು ಪರಿಗಣಿಸಿದರು. ಲಾರ್ಡ್ ವೆಲ್ಲೆಸ್ಲಿಯು ತನ್ನ ಸಹಾಯಕ ಸೈನ್ಯ ಪದ್ಧತಿಯ ಅಡಿಯಲ್ಲಿ ಮೈಸೂರನ್ನು ತರಲು ಯೋಚಿಸಿದನು. ಆದರೆ ಟಿಪ್ಪುವಿಗೆ ತನ್ನ ಅಧಿಕಾರವನ್ನು ಬ್ರಿಟಿಷರಿಗೆ ಒಪ್ಪಿಸುವುದು ಇಷ್ಟವಿರಲಿಲ್ಲ. ಕೊನೆಗೆ ಕ್ರಿ.ಶ. ೧೭೯೯ರಲ್ಲಿ ಬ್ರಿಟಿಷರಿಗೂ ಮತ್ತು ಟಿಪ್ಪುವಿಗೂ ಆಂಗ್ಲೋ-ಮೈಸೂರು ಯುದ್ಧ ನಡೆದು, ಶ್ರೀರಂಗಪಟ್ಟಣದಲ್ಲಿ ಟಿಪ್ಪುವಿನ ಸೋಲು ಹಾಗೂ ಮರಣದಿಂದ ಮೈಸೂರು ಸಂಸ್ಥಾನ ಬ್ರಿಟಿಷ್ ವಸಾಹತುಶಾಹಿಯ ಕಪಿಮುಷ್ಠಿಗೆ ಸೇರ್ಪಡೆಯಾಯಿತು. ಕೊನೆಗೆ ಮೈಸೂರು ರಾಜ್ಯವನ್ನು ಗುಂಪು ಗುಂಪಾಗಿ ಒಡೆದು, ಉತ್ತರದ ಕೆಲವು ಪ್ರದೇಶಗಳು ಮುಂಬಾಯಿ ಪ್ರೆಸಿಡೆನ್ಸಿಯ ಒಂದು ಭಾಗವಾದವು. ದಕ್ಷಿಣ ಕನ್ನಡ, ಬಳ್ಳಾರಿ, ಹಾಗೂ ಈಗಿನ ಮೈಸೂರು ಮತ್ತು ಬೆಂಗಳೂರು ಜಿಲ್ಲೆಯ ಕೆಲವು ಭಾಗಗಳು ಮದ್ರಾಸ್ ಪ್ರೆಸಿಡೆನ್ಸಿಯೊಡನೆ ವಿಲೀನವಾದವು. ರಾಯಚೂರು, ಗುಲ್ಬರ್ಗ, ಬೀದರ್ ಜಿಲ್ಲೆಗಳ ಈಶಾನ್ಯ ಭಾಗದ ಪ್ರದೇಶ ಹೈದರಾಬಾದಿನ ನಿಜಾಮನಿಗೆ ಸೇರಿದವು. ಹಾಗೆಯೇ ಕರ್ನಾಟಕದ ದಕ್ಷಿಣ ಭಾಗ ಅಂದರೆ ಮೈಸೂರು ಟಿಪ್ಪುವಿನ ಪರಾಭವದ ನಂತರ ಮೈಸೂರು ಒಡೆಯರ ಅಧೀನಕ್ಕೆ ಒಳಪಟ್ಟು, ಮೈಸೂರು ಬ್ರಿಟಿಷರ ಮೇಲೆ ಅವಲಂಬಿತವಾಯಿತು.[೯]

ಕೆಲವು ಪ್ರದೇಶಗಳನ್ನು ಬ್ರಿಟಿಷರೇ ನೇರವಾಗಿ ಆಳಿದರೆ, ಉಳಿದ ಪ್ರದೇಶಗಳು ಬ್ರಿಟಿಷರ ಹಿಡಿತದಲ್ಲಿದ್ದ ಭಾರತೀಯ ರಾಜರ ಮೂಲಕ ಆಳಲ್ಪಡುತ್ತಿದ್ದವು. ಈ ರಾಜ್ಯಗಳಿಗೆ ತಮ್ಮದೇ ಆದ ಸೈನ್ಯವೂ ಇರಲಿಲ್ಲ, ಹಾಗೂ ಸ್ವತಂತ್ರ್ಯವಾಗಿ ರಾಜ ತಾಂತ್ರಿಕ ಸಂಬಂಧಗಳನ್ನು ಬೆಳೆಸುವ ಅವಕಾಶವೂ ಇರಲಿಲ್ಲ.[೧೦] ಅಂತಹ ರಾಜ್ಯಗಳಲ್ಲಿ ಮೈಸೂರು ಸಂಸ್ಥಾನವೂ ಒಂದು. ಟಿಪ್ಪು ಸುಲ್ತಾನನ ಪತನದ ಬಳಿಕ ಬ್ರಿಟಿಷರು ಕರ್ನಾಟಕದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿಕೊಂಡರು. ಹೈದರಾಬಾದಿನ ನಿಜಾಮ, ಮರಾಠರು ಮತ್ತು ಮೈಸೂರಿನ ಅರಸರನ್ನು ತಮ್ಮ ಅಧಿಕಾರಿಗಳನ್ನು ಆಡಳಿತ ನಿರ್ವಹಿಸಲು ನೇಮಿಸುವುದರ ಮೂಲಕ ಅಧೀನವಾಗಿಟ್ಟುಕೊಂಡರು. ಕರ್ನಾಟಕವನ್ನು ಹಲವಾರು ಭಾಗಗಳನ್ನಾಗಿ ವಿಂಗಡಿಸಿದ್ದರೂ ಸಹ ಬ್ರಿಟಿಷ್ ಸರ್ಕಾರ ಅವುಗಳೆಲ್ಲವುಗಳ ಮೇಲೆ ತನ್ನ ನಿಯಂತ್ರಣವನ್ನು ಇಟ್ಟುಕೊಂಡಿತು. ಹಾಗೂ ರಾಜಕೀಯ ಅಸ್ತಿತ್ವವನ್ನು ಸ್ಥಾಪಿಸಲು ಅನೇಕ ತಂತ್ರಗಳನ್ನು ಬಳಸಿದರು.

ಬ್ರಿಟಿಷರು ತಾವು ಗೆದ್ದ ಪ್ರದೇಶಗಳನ್ನು ವಿಭಜಿಸಿ ವಸಾಹತುಶಾಹಿ ಪ್ರಭುತ್ವವನ್ನು ನಿರ್ಮಿಸುವ ಉದ್ದೇಶವನ್ನು ಹೊಂದಿದ್ದರು. ಅದರಂತೆ ಕರ್ನಾಟಕವನ್ನು ವಿಭಜಿಸಿ ಬ್ರಿಟಿಷ್ ಕರ್ನಾಟಕವನ್ನು ನಿರ್ಮಿಸಿಕೊಂಡರು. ಬ್ರಿಟಿಷರು ತಾವು ಗೆದ್ದ ಪ್ರದೇಶಗಳನ್ನು ಕ್ರೋಢೀಕರಿಸಲು ಮತ್ತು ಸಾಮ್ರಾಜ್ಯದ ತಳಹದಿಯನ್ನು ಬಿಗಿಗೊಳಿಸಲು ಅಧೀನರಾಜರನ್ನು ಉಪಯೋಗಿಸಿಕೊಂಡರು.[೧೧] ಸ್ಥಳೀಯ ಮನೆತನಗಳನ್ನು ಗೆದ್ದು ಘಟಕಗಳನ್ನಾಗಿಸಿ ವಸಾಹತುಶಾಹಿ ಆಡಳಿತವನ್ನು ರೂಪಿಸುವುದು ಅವರ ಧೋರಣೆ ಆಗಿತ್ತು. ಹಾಗೂ ವಸಾಹತು ಭಾರತದಲ್ಲಿ ಏಕರೂಪ ಆಡಳಿತವನ್ನು ಸ್ಥಾಪಿಸಿ ಒಂದು ಸಾಮ್ರಾಜ್ಯವನ್ನು ಕಟ್ಟುವ ಹಿತಾಸಕ್ತಿಯನ್ನು ಬ್ರಿಟಿಷರು ಹೊಂದಿದ್ದರು. ಬ್ರಿಟಿಷರ ವಿರುದ್ಧ ಹೋರಾಡುವುದು ಕಠಿಣವೂ, ಅಪಾಯಕಾರಿಯೂ ಆದ ಸಂಗತಿಯೆಂದು ಮನಗಂಡ ದೇಶೀಯ ರಾಜರುಗಳು ಬ್ರಿಟಿಷ್ ವಸಾಹತುಶಾಹಿಯ ಜೊತೆಗೇ ಹೊಂದಾಣಿಕೆ ಮಾಡಿಕೊಳ್ಳಲು ಮುಂದಾದರು. ಇದರಿಂದ ಬ್ರಿಟಿಷ್ ಆಡಳಿತಕ್ಕೆ ಅನುಮೋದನೆ ದೊರಕಿದಂತಾಯಿತು. ಸಾಮಂತ ಮೈತ್ರಿ ಪದ್ಧತಿಯನ್ನು ರೂಪಿಸಿದ ಬ್ರಿಟಿಷರು ಅದರ ಪ್ರಕಾರ ಬ್ರಿಟಿಷರ ಪರಮಾಧಿಕಾರ ಒಪ್ಪಿಕೊಂಡ ದೇಶೀಯ ರಾಜರು ತಮ್ಮ ರಾಜ್ಯಗಳನ್ನು ಆಳಲು ಅವಕಾಶ ಪಡೆದರು. ಒಂದು ಸಮಾನಾಂತರವಾದ ರಾಜಕೀಯ ರಚನೆಯನ್ನು ಸೃಷ್ಟಿಸುವುದರ ಮೂಲಕ ಬ್ರಿಟಿಷರು ಒಂದು ಹೊಸ ಪ್ರಯೋಗ ನಡೆದರೂ ಸಹ ರಾಜರನ್ನು ಸಂಪೂರ್ಣವಾಗಿ ನಂಬಿರಲಿಲ್ಲ. ಒಂದು ಅಂಗ ಸೈನ್ಯವನ್ನು ಅವರು ಆಯಾ ರಾಜ್ಯಗಳ ಖರ್ಚಿನಲ್ಲಿ ಸಿದ್ಧವಾಗಿಟ್ಟುಕೊಂಡಿದ್ದರು. ಮೇಲ್ನೋಟಕ್ಕೆ ಆಯಾ ರಾಜರನ್ನು ಹೊರಗಿನ ಆಕ್ರಮಣದಿಂದ ರಕ್ಷಿಸಲು ಸೈನ್ಯ ಇತ್ತಾದರೂ ಆಂತರ್ಯದಲ್ಲಿ ಬ್ರಿಟಿಷರ ಹಿಡಿತದಲ್ಲಿ ಸೈನ್ಯ ಸನ್ನದವಾಗಿದ್ದುದ್ದು ಕಂಡುಬರುತ್ತದೆ.[೧೨] ಅದರಲ್ಲೂ ರಾಜ್ಯಗಳನ್ನು ಸೃಷ್ಟಿಮಾಡಿದ ಪರಿಣಾಮವಾಗಿ ಬ್ರಿಟಿಷರಿಗೆ ಅವರು ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚಿನ ರೀತಿಯ ಲಾಭವಾಯಿತು.

ಬ್ರಿಟಿಷ್ ಸರ್ಕಾರ ಸ್ಥಳೀಯ ಭೂಮಾಲೀಕರ ಮತ್ತು ಶ್ರೀಮಂತರ ವಿಶ್ವಾಸ ಗಳಿಸಿ, ಸ್ಥಳೀಯ ಆಡಳಿತದಲ್ಲಿ ಅವರನ್ನು ಭಾಗಿಗಳಾಗುವಂತೆ ಪ್ರೇರೇಪಿಸಿ, ವಸಾಹತುಶಾಹಿಯ ಆಳ್ವಿಕೆಯೊಳಗೆ ತಂದು ತನ್ನ ಕಾರ್ಯವನ್ನು ಸುಗಮಗೊಳಿಸಿತು. ಇದು ಬ್ರಿಟಿಷ್ ಸರ್ಕಾರ ಭಾರತದುದ್ದಕ್ಕೂ ಹೊಂದಿದ್ದ ಸಾಮ್ರಾಜ್ಯಶಾಹಿ ಧೋರಣೆಯಾಗಿತ್ತು. ಮೈಸೂರನ್ನು ಬ್ರಿಟಿಷರು ವಸಾಹತುವನ್ನಾಗಿಸಿ, ಬ್ರಿಟಿಷ್ ಮಾದರಿಯಲ್ಲಿ ಅಭಿವೃದ್ಧಿಗೊಳಿಸಲು ಮುಂದಾದರು. ಅದರಂತೆ ಕೈಗಾರಿಕೀಕರಣಕ್ಕೆ ಪೂರಕವಾದ ವ್ಯವಸ್ಥೆಯೊಂದನ್ನು ಕರ್ನಾಟಕದಲ್ಲಿ ರೂಪಿಸುವ ಉದ್ದೇಶದಿಂದ, ಅವರ ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿ ಕೃಷಿಪ್ರಧಾನವಾದ ಭಾರತವನ್ನು ವಾಣಿಜ್ಯೀಕರಿಸಿ, ಈ ದೆಸೆಯಲ್ಲಿ ಭಾರತದ ನಿರ್ಮಾಣದ ಕಾರ್ಯಕ್ಕೆ ಮುಂದಾದರು. ಇವರ ಆರ್ಥಿಕ ಆಡಳಿತ ಹಾಗೂ ಭೂಕಂದಾಯ ಪದ್ಧತಿಗಳಲ್ಲಿ ಜಾರಿಗೊಳಿಸಿದ ಬದಲಾವಣೆಗಳು ಕೃಷಿಪ್ರಧಾನ ಸಮಾಜವನ್ನು ಅಸ್ತವ್ಯಸ್ತಗೊಳಿಸಿದವು.

ಬ್ರಿಟಿಷರು ರೈತರಿಂದ ಭೂಕಂದಾಯ ರೂಪದಲ್ಲಿ ಅಧಿಕಮೊತ್ತವನ್ನು ವಸೂಲು ಮಾಡಿದರು. ವಸಾಹತು ಪದ್ಧತಿಯಿಂದ ಹೊಸ ಜನವರ್ಗವಾದ ಲೇವಾದೇವಿಗಾರರಿಂದ ಪಡೆದ ಸಾಲಗಳನ್ನು ಮರುಪಾವತಿ ಮಾಡಲಾಗದೆ ತಮ್ಮ ಜಮೀನುಗಳನ್ನು ಕಳೆದುಕೊಂಡರು.[೧೩]

ಬಿಪನ್ ಚಂದ್ರ ಅವರ ಪ್ರಕಾರ 'ವಸಾಹತುಶಾಹಿ ಒಂದು ಹೊಸ ಉತ್ಪಾದನ ವಿಧಾನವಲ್ಲ. ಅದು ಹಲವಾರು ಉತ್ಪಾದನ ವಿಧಾನಗಳನ್ನು ಒಳಗೊಂಡಿರುವ ಸಂಮಿಶ್ರವಾದ ವ್ಯವಸ್ಥೆ.' ಆ ವ್ಯವಸ್ಥೆಯೊಳಗೆ ಊಳಿಗಮಾನ್ಯತೆ, ಬಂಡವಾಳಶಾಹಿ, ಜೀತ, ಶೋಷಣೆ, ವ್ಯಾಪಾರ, ಕೈಗಾರಿಕೆ, ಕೃಷಿ ಮುಂತಾದವುಗಳೆಲ್ಲಾ ಸೇರಿಕೊಂಡಿರುತ್ತವೆ. ವಸಾಹತುಶಾಹಿಯು ಊಳಿಗಮಾನ್ಯತೆಯೊಂದಿಗೆ ಸಂಬಂಧ ಬೆಳೆಸಿತು. ಬೇರೆ ಬೇರೆ ರೀತಿಯ ಉತ್ಪಾದನಾ ವಿಧಾನಗಳಿಂದ ಸಂಪತ್ತನ್ನು ಶೇಖರಿಸುವುದು ವಸಾಹತುಶಾಹಿಯ ಉದ್ದೇಶವಾಗಿತ್ತು.[೧೪] ವಸಾಹತುಶಾಹಿ ಪ್ರವೇಶದಿಂದ ಮೈಸೂರು ಸಂಸ್ಥಾನದಲ್ಲಿ ಹೊಸ ಸಾಮಾಜಿಕ ವರ್ಗಗಳ ಉದಯವಾಯಿತು. ಅನೇಕ ಮಿಷನರಿ ಸಂಸ್ಥೆಗಳ ಮೂಲಕ ಶಿಕ್ಷಣ ಹಾಗೂ ಧಾರ್ಮಿಕವಾಗಿ ಪ್ರಭಾವ ಬೀರಿತು. ಹಾಗೂ ರಾಷ್ಟ್ರೀಯವಾದದ ಉಗಮಕ್ಕೆ ಕಾರಣವಾಗಿದೆ. ಕಾರಣ ಆಯಾ ದೇಶದ ಸಾಮಾಜಿಕ ಆಡಳಿತ ಮತ್ತು ಸಾಂಸ್ಕೃತಿಕ ಜೀವನದ ಮೇಲೂ ಗಾಢವಾದ ಪರಿಣಾಮಗಳನ್ನು ಉಂಟುಮಾಡಿ, ಬ್ರಿಟಿಷ್ ಆಳ್ವಿಕೆ ಅನಿವಾರ್ಯ ಎನ್ನುವ ಭಾವನೆಯನ್ನು ಬಿಂಬಿಸುವುದು ವಸಾಹತುಶಾಹಿಯ ಪ್ರಥಮ ಕಾರ್ಯ. ಈ ಕಾರಣದಿಂದ ಬ್ರಿಟಿಷ್ ಆಡಳಿತವನ್ನು 'ಆಧುನಿಕ' ಎಂದು ಕರೆದು, ಬ್ರಿಟಿಷ್ ಪೂರ್ವ ಅವಧಿಯನ್ನು ಕತ್ತಲೆಯ ಯುಗ ಎಂದು ಕರೆಯಲಾಯಿತು.[೧೫]

ವಸಾಹತುಶಾಹಿಯು ಆಧುನಿಕವಾದ, ಸಂಕೀರ್ಣವಾದ, ಬಂಡವಾಳ ಕೇಂದ್ರಿತವಾದ ಹಾಗೂ ವಿರೋದಾಭಾಸಗಳಿಂದ ಕೂಡಿದ ಪರಿಕಲ್ಪನೆಯಾಗಿದೆ.[೧೬] ಬ್ರಿಟಿಷರು ಭಾರತವನ್ನು ಬಿಟ್ಟು ಹೋದ ಮೇಲು ಭಾರತ ಈ ಸಂಕೀರ್ಣತೆಗಳಿಂದ ಹೊರಬರಲು ಸಾಧ್ಯವಾಗಲಿಲ್ಲ. ಬ್ರಿಟಿಷ್ ಆಳ್ವಿಕೆ ಕ್ರಮ ಹಾಗೂ ಹಲವಾರು ವಿರೋದಾಭಾಸಗಳಿಂದ ಕೂಡಿದ ಸ್ಥಳೀಯ ಆಡಳಿತ ಕ್ರಮ ಇವೆರಡೂ ಪ್ರಜಾಪ್ರಭುತ್ವ ರೂಪುಗೊಳ್ಳುವ ಸಂದರ್ಭದಲ್ಲಿ ಹೆಚ್ಚು ಚರ್ಚೆಗೆ ಬಂದಂತಹ ವಿಚಾರಗಳು. ವಸಾಹತು ಪ್ರಭುತ್ವ ಹಾಗೂ ಸ್ಥಳೀಯ ರಾಜಪ್ರಭುತ್ವ ಇವೆರಡರ ಲಕ್ಷಣಗಳನ್ನು ಸಂಪೂರ್ಣವಾಗಿ ನಿರಾಕರಿಸಿ ಪ್ರಜಾಪ್ರಭುತ್ವ ರೂಪಗೊಳ್ಳಲಿಲ್ಲ. ಬ್ರಿಟಿಷ್ ಆಳ್ವಿಕೆಯ ಅವಧಿಯಲ್ಲಿಯೇ ಹೊಸ ಬಗೆಯ ಆಡಳಿತ ಕ್ರಮ ರೂಪಗೊಳ್ಳಲಾರಂಭಿಸಿತ್ತು. ಇದು ಬ್ರಿಟನ್ ಮಾದರಿಯದಾಗಿತ್ತು ಹಾಗೂ ಸ್ಥಳೀಯ ನಾಯಕರು ಇದನ್ನು ಸ್ಥಳೀಯವನ್ನಾಗಿಸುವ ಪ್ರಯತ್ನಮಾಡಿದರು. ಮೈಸೂರು ಸಂಸ್ಥಾನದಲ್ಲಿ ಈ ಬಗೆಯ ಪ್ರಯತ್ನಗಳು ಸಾಕಷ್ಟು ನಡೆದವು. ಮಾಹಾರಾಜರ ಉಪಸ್ಥಿತಿಯಲ್ಲಿ ಉದಾರವಾದಿ ಹಾಗೂ ಸಂವಿಧಾನಾತ್ಮಕ ನೆಲೆಯಲ್ಲಿ

ಕಾಣಿಸಿಕೊಳ್ಳಲಾರಂಭಿಸಿತು. ಆಶ್ರಿತ ಸಂಸ್ಥಾನವಾಗಿದ್ದ ಮೈಸೂರು ಮಾದರಿ ಸಂಸ್ಥಾನವಾಗಿ ಬೆಳೆದದ್ದು ಈ ಹಿನ್ನೆಲೆಯಿಂದಲೇ.

## ೨.೨ ಮಾದರಿ ಸಂಸ್ಥಾನವಾಗಿ ಮೈಸೂರು

ಬ್ರಿಟಿಷ್ ಸರ್ಕಾರದವರು ಮೈಸೂರು ಸಂಸ್ಥಾನದ ಆಡಳಿತವನ್ನು ೧೮೮೧ರಲ್ಲಿ ಪುನಃ ರಾಜರ ಆಳ್ವಿಕೆಗೆ ಒಳಪಡಿಸಿದರು. ಇದಾದ ತರುವಾಯ ಸಂಸ್ಥಾನದಲ್ಲಿ ಮೂರು ಮಂದಿ ಅರಸರು ೧೯೪೭ರವರೆಗೂ ಆಳ್ವಿಕೆ ನಡೆಸಿದರು. ಅವರುಗಳೆಂದರೆ ೧೦ನೇ ಜಯಚಾಮರಾಜ ಒಡೆಯರ್, ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಜಯಚಾಮರಾಜ ಒಡೆಯರ್ ಇವರು ಆಳ್ವಿಕೆ ನಡೆಸಿದ ಕಾಲವನ್ನು 'ಆಧುನಿಕ ಮೈಸೂರು' ಎಂದು ಕರೆಯಲಾಗಿದೆ.[೧೭] ಈ ಆಧುನಿಕ ಮೈಸೂರಿನ ಕಾಲದಲ್ಲಿ ಬ್ರಿಟಿಷ್ ವಸಾಹತುಶಾಹಿಯ ತತ್ವಗಳನ್ನು ಕ್ರಮವಾಗಿ ಮೈಸೂರು ಸಂಸ್ಥಾನದ ರಾಜಶಾಹಿ ಅನುಸರಿಸುವತ್ತ ದಾಪುಗಾಲು ಹಾಕುತ್ತಿತ್ತು. ಪೂರ್ತಿಯಾಗಿ ವಸಾಹತುಶಾಹಿಯ ನೆರಳಿನಲ್ಲಿಯೆ ಮೈಸೂರು ಸಂಸ್ಥಾನ ಬೆಳೆಯ ತೊಡಗಿತು. ಇಂತಹ ಸಂದರ್ಭದಲ್ಲಿ ಜನಪ್ರಭುತ್ವವನ್ನು ಹತೋಟಿಯಲ್ಲಿಟ್ಟುಕೊಳ್ಳಲು ಬ್ರಿಟಿಷ್ ವಸಾಹತುಶಾಹಿಯು ಅನುಸರಿಸಿದ ಧೋರಣೆಯನ್ನು ರಾಜಪ್ರಭುತ್ವ ಪಾಲಿಸತೊಡಗಿತು.

ಮೈಸೂರು ಸಂಸ್ಥಾನದಲ್ಲಿ ೧೮೮೧ ರಿಂದ ೧೯೪೭ರವರೆಗೆ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಅಭಿವೃದ್ಧಿ ಪಥದೆಡೆಗೆ ನಡೆದ ಕಾರ್ಯಗಳನ್ನು ಅನುಲಕ್ಷಿಸಿ ಮೈಸೂರು ಸಂಸ್ಥಾನವನ್ನು 'ಮಾದರಿ ಸಂಸ್ಥಾನ' ಎಂದು ಕರೆದಿದ್ದಾರೆ. ಈ ಮಾದರಿಯನ್ನುವುದು ಬೇರೆ ಯಾವ ದೇಶ ಅಥವಾ ಸಂಸ್ಥಾನ ಮಾಡದ ಕಾರ್ಯವನ್ನು ಒಂದು ದೇಶ ಅಥವಾ ಸಂಸ್ಥಾನ ಆ ಕಾರ್ಯವನ್ನು ಮಾಡಿದರೆ ಅದು ಮಾದರಿಯಾಗಿ ಪರಿಣಮಿಸುತ್ತದೆ. ೧೮೮೧ರಲ್ಲಿ ಮೈಸೂರಿನ ರಾಜರಾದ ೧೦ನೆಯ ಚಾಮರಾಜ ಒಡೆಯರು ದಿವಾನ್ ರಂಗಚಾರ್ಲುರವರ ಸಹಕಾರದಿಂದ ಪ್ರಜಾ ಬೇಡಿಕೆ ಇಲ್ಲದಿದ್ದರು ರಾಜಮನೆತನದ ರಾಜಕೀಯ ಜರೂರಿನಿಂದಾಗಿ ಮೈಸೂರಿನಲ್ಲಿ, ಪ್ರಜೆಗಳ ಆಳ್ವಿಕೆಗಾಗಿ ಪ್ರಜಾ ಪ್ರತಿನಿಧಿ ಸಭೆಯನ್ನು ಸೃಷ್ಟಿಸಿ ಅದರ ನಿರ್ಣಯದ ಮೂಲಕ ಆಳ್ವಿಕೆ ನಡೆಸುವ ಪದ್ಧತಿಯನ್ನು ಜಾರಿಗೆ ತಂದರು. ಈ ಸಭೆಯು ಭಾರತ ದೇಶಕ್ಕೆ ಶಕ್ತಿಹೀನ ಮಾದರಿ ಪ್ರಜಾಪ್ರಭುತ್ವ ಸಭೆಗೆ ನಾಂದಿಯಾಡಿತು, ಹಾಗೂ ೧೯೦೭ರಲ್ಲಿ ನ್ಯಾಯವಿಧಾಯಕ ಸಭೆಯನ್ನು ಸ್ಥಾಪಿಸಿದರು. ಮೈಸೂರು ಸರ್ಕಾರ ಶಿಕ್ಷಣ ಪ್ರಸಾರಕ್ಕಾಗಿ ಉದಾರವಾಗಿ ವೆಚ್ಚ ಮಾಡುತ್ತಿತ್ತು. ಅದರಲ್ಲೂ ದಲಿತರಿಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಮುಂದಾಗಿ ತೊಡಗಿಸಿಕೊಳ್ಳುವ ಅವಕಾಶ ನೀಡಿ ಮಾದರಿ ರಾಜ್ಯ ಎಂದು ಹೆಗ್ಗಳಿಕೆಗೂ ಪಾತ್ರವಾಯಿತು.[೧೮] ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ಮೈಸೂರು ಸಂಸ್ಥಾನವು ದಲಿತ ವರ್ಗದವರಲ್ಲಿ ಇಡೀ ಭಾರತದಲ್ಲಿಯೇ ಐವತ್ತು ವರ್ಷಗಳಷ್ಟು ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿತವನ್ನು ತಂದುಕೊಟ್ಟಿತು. ಪಂಚಮರಿಗಾಗಿ ಸರ್ಕಾರಿ ಶಾಲೆಯನ್ನು, ಅನುದಾನ ರಹಿತ

ಶಾಲೆಯನ್ನು ಆರಂಭಿಸಿತು. ಹಾಗೂ ಸಾರ್ವಜನಿಕ ಶಾಲೆಗಳು ಸಹ ಯಾವುದೇ ಜಾತಿಯ ಧರ್ಮದ ಭೇದ ಭಾವ ಇಲ್ಲದೆ ಪ್ರವೇಶ ಪಡೆಯುವ ಅವಕಾಶವನ್ನು ಕಲ್ಪಿಸಲಾಗಿತ್ತು.

ದಲಿತರಿಗೆ ಪ್ರಥಮವಾಗಿ ಅರಮನೆಯನ್ನು ಪ್ರವೇಶಿಸಲು ಅವಕಾಶವನ್ನು ಕಲ್ಪಿಸಿದ್ದು ಸಹ ಮೈಸೂರು ಸಂಸ್ಥಾನದಲ್ಲಿ. ಮಹಿಳೆಯರಿಗಾಗಿ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತಂದರು. ಮಹಾರಾಣಿಯವರ ಹೆಸರಿನಲ್ಲಿ ಸ್ಥಾಪಿತವಾಗಿದ್ದ ಬಾಲಿಕಾ ಪಾಠಶಾಲೆಯು ಪ್ರೌಢಶಾಲೆಯಾಗಿ ಬೆಳೆಯಿತು. ಇದನ್ನು ಗಮನಿಸಿದ ಪ್ರಿನ್ಸ್ ಆವ್‌ವೆಲ್ಸ್‌ರವರು ಅದನ್ನು ಮಾದರಿ ಪಾಠಶಾಲೆ ಎಂಬುದಾಗಿ ಶ್ಲಾಘಿಸಿದ್ದಾರೆ. ಮುಂದೆ ೧೯೦೧ರಲ್ಲಿ ಈ ಶಾಲೆ ಮಹಾರಾಣಿ ಕಾಲೇಜಾಗಿ ಮಾರ್ಪಟ್ಟಿತು. ಈ ಸಂಸ್ಥೆಗೆ ಭೇಟಿಕೊಟ್ಟ ಬ್ರಿಟಿಷ್ ಪ್ರಜೆ "ಸ್ತ್ರೀ ಶಿಕ್ಷಣದ ವಿಚಾರದಲ್ಲಿ ಈ ಸಂಸ್ಥೆಯು ದೇಶದಲ್ಲಿಯೇ ಮುಖ್ಯವಾಗಿದೆ. ಇದನ್ನು ಮಹಾರಾಜರ ಸಾಮ್ರಾಜ್ಯದಲ್ಲಿನ ಅತ್ಯಂತ ರತ್ನಗಳಲ್ಲೊಂದೆಂದು ಭಾವಿಸಲಾಗಿದೆ". ಎಂದು ಹೇಳಿದ್ದಾನೆ.[೨೦] ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸಮಾಜದಲ್ಲಿದ್ದ ಅನಿಷ್ಠ ಪದ್ದತಿಗಳ ನಿರ್ಮೂಲನೆಗಾಗಿ ೧೯೦೯ರಲ್ಲಿ ದೇವದಾಸಿ ನಿಷೇಧಾಜ್ಞೆ, ೧೯೩೬ರಲ್ಲಿ ವೇಶ್ಯಾವೃತ್ತಿ ನಿಷೇಧಾಜ್ಞೆ ಕಾನೂನು, ೧೯೩೮ರಲ್ಲಿ ದಿ ಮೈಸೂರು ಹಿಂದೂ ವಿಡೋ ರೀಮ್ಯರೇಟ್ ಆಕ್ಟ್ ಮತ್ತು ದಿ ಪ್ರಿವೆನ್ಸ್‌ನ್ ಆಫ್ ಸ್ಮೋಕಿಂಗ್ ಆಕ್ಟ್ ಇತ್ಯಾದಿ ಕಾಯಿದೆ, ಕಾನೂನುಗಳನ್ನು ಭಾರತ ದೇಶದಲ್ಲಿಯೇ ಪ್ರಥಮವಾಗಿ ಮೈಸೂರು ಸಂಸ್ಥಾನದಲ್ಲಿ ಜಾರಿಗೆ ತರಲಾಯಿತು.[೨೧]

ದೇಶೀಯ ರಾಜ್ಯಗಳಲ್ಲಿಯೇ ಮೊಟ್ಟ ಮೊದಲು ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ ದಾಖಲೆಯು ಮೈಸೂರು ಸಂಸ್ಥಾನಕ್ಕೆ ಸಲ್ಲುತ್ತದೆ. ದಕ್ಷಿಣ ಭಾರತ ವಿಶೇಷವಾಗಿ ಮೈಸೂರು ಆಧುನಿಕ ಇಂಗ್ಲಿಷ್ ವಿದ್ಯಾಭ್ಯಾಸ ಪಡೆಯುವುದರಲ್ಲಿ ಭಾರತದಲ್ಲಿಯೇ ಮುಂದಿತ್ತು. ಕಾಡಿನಲ್ಲಿನ ಬುಡಕಟ್ಟು ಅರಣ್ಯವಾಸಿಗಳಿಗೆ ಮೊಟ್ಟ ಮೊದಲು ಶಾಲೆಗಳನ್ನು ಪ್ರಾರಂಭಿಸಿದರು. ಬ್ರೌನಿಂಗ್‌ನು "ಮೈಸೂರು ಭಾರತಕ್ಕೆ ಮಾತ್ರವಲ್ಲದೇ ಇಡೀ ಜಗತ್ತಿಗೆ ಮಾದರಿಯಾಗಿ ಇರುವ ಸಂಸ್ಥಾನವಾಗಿದೆ" ಎಂದು ಹೇಳಿದ್ದಾನೆ.[೨೨] ಸ್ತ್ರೀಯರಿಗೆ ದೇಶದಲ್ಲಿಯೇ ಪ್ರಥಮವಾಗಿ ಮತದಾನದ ಹಕ್ಕನ್ನು ೧೯೨೭ರಲ್ಲಿ ಜಾರಿಗೆ ತಂದು ಮೈಸೂರು ಸಂಸ್ಥಾನವನ್ನು ಭಾರತೀಯ ಸಂಸ್ಥಾನದಲ್ಲಿಯೇ ಮಾದರಿ ಸಂಸ್ಥಾನವನ್ನಾಗಿಸಿದರು. ಏಷ್ಯಾ ಖಂಡದಲ್ಲಿಯೇ ಮೊದಲ ಜಲ ವಿದ್ಯುತ್ ಯೋಜನೆಯನ್ನು ಶಿವನ ಸಮುದ್ರದಲ್ಲಿ ಪ್ರಾರಂಭಿಸಿದರು. ಇನ್ನೂ ಅನೇಕ ರೀತಿಯ ಜನೋಪಯೋಗಿ ಕಾರ್ಯಗಳನ್ನು ಮಾಡಿ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲಾವಧಿಯಲ್ಲಿ ಮೈಸೂರು 'ಮಾದರಿ ರಾಜ್ಯ' ವೆಂಬ ಬಿರುದನ್ನು ಪಡೆಯಿತು. ಗಾಂಧೀಜಿಯವರು ಮೈಸೂರನ್ನು 'ರಾಮರಾಜ್ಯ'ವೆಂದು ನಾಲ್ವಡಿ ಕೃಷ್ಣರಾಜರನ್ನು 'ರಾಜರ್ಷಿ' ಎಂದು ಮೆಚ್ಚಿದ್ದಾರೆ.[೨೩]

"ಹೆಚ್ಚಿನ ಪ್ರಗತಿಯನ್ನು ಎಲ್ಲಾ ಕ್ಷೇತ್ರಗಳಲ್ಲಿ ಸಾಧಿಸಿದ ರಾಜ್ಯ ಮೈಸೂರು, ಇದು ಮಾದರಿ ಸಂಸ್ಥಾನವಾಗಿದೆ. ಮಾದರಿ ಸಂಸ್ಥಾನವೆಂಬ ಹೆಗ್ಗಳಿಕೆ ಮತ್ಯಾವ ಭಾರತೀಯ

ಸಂಸ್ಥಾನಕ್ಕೂ ಇಲ್ಲ. ಹಾಗೆಯೆ ಭಾರತಕ್ಕೆ ಮಾತ್ರವಲ್ಲದೇ ಇಡೀ ಜಗತ್ತಿಗೆ ಮಾದರಿಯಾಗಿರುವ ಸಂಸ್ಥಾನವಾಗಿದೆ". ಇದು ಭಾರತದ ಸುಧಾರಣೆಗಳಿಗೆ ಸಂಬಂಧಿಸಿದ ಪ್ರಥಮ ದುಂಡುಮೇಜಿನ ಸಮ್ಮೇಳನದ ಸಂಯುಕ್ತ ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಲಾರ್ಡ್ ಸಾಂಕಿಯವರು ಮಾಡಿರುವ ಶ್ಲಾಘನೆ. ಸಮಾಜದಲ್ಲಿನ ಎಲ್ಲಾ ಕ್ಷೇತ್ರಗಳಲ್ಲಿ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಿದ್ದರು ಎಂದು ಹಲವರು ಅಭಿಪ್ರಾಯಪಟ್ಟಿದ್ದಾರೆ. ಹಾಗೂ ಬ್ರಿಟಿಷ್ ಭಾರತದಲ್ಲಿ ಅಚ್ಚಾಗುತ್ತಿದ್ದ ಎಲ್ಲಾ ರಾಷ್ಟ್ರೀಯವಾದಿ ಪತ್ರಿಕೆಗಳೂ ಹಾಗೂ ಹಲವಾರು ಬ್ರಿಟಿಷರು ಮೈಸೂರನ್ನು ಮಾದರಿ ಮೈಸೂರು ಎಂದೇ ಕರೆಯುತ್ತಿದ್ದರು.[೨೪]

ಇಲ್ಲಿ ಮಾದರಿ ಸಂಸ್ಥಾನ ಎಂಬ ಕಲ್ಪನೆಯು ಬ್ರಿಟಿಷ್ ಪ್ರಭುತ್ವದ್ದಾಗಿದೆ. ಬ್ರಿಟಿಷ್ ವಸಾಹತುಶಾಹಿಯು ಮೈಸೂರು ಸಂಸ್ಥಾನದಲ್ಲಿ ಅನೇಕ ಉತ್ತಮ ಯೋಜನೆಗಳನ್ನು ಜಾರಿಗೆ ತಂದು ಸಂಸ್ಥಾನವನ್ನು ಮಾದರಿ ಸಂಸ್ಥಾನವನ್ನಾಗಿ ಬೆಳೆಸಿ, ಆ ಮೂಲಕ ಇತರ ಸಂಸ್ಥಾನಗಳನ್ನೂ ತನ್ನೆಡೆಗೆ ಸೆಳೆಯುವ ತಂತ್ರವನ್ನು ಹೊಂದಿತ್ತು. "ರಾಜ್ಯದ ಸತ್ಕಾರ್ಯ ಭಾವನೆಗೆ ಹಾಗೂ ಉದಾರ ಧನ ಸಹಾಯ ಮಾಡುವ ರೀತಿಗೆ ಪತ್ರಿಕೆಗಳು ಮೈಸೂರು ಸಂಸ್ಥಾನವನ್ನು ಮಾದರಿ ಸಂಸ್ಥಾನವೆಂದು ಬರೆಯುತ್ತವೆ. ಮೈಸೂರು ಮಾದರಿ ಸಂಸ್ಥಾನವೆಂದು ಹೇಳಲು ಹೇಗೆ ಸಾಧ್ಯ, ಕಟ್ಟಾ ಕಾಂಗ್ರೆಸಿಗರೂ ಸಹ ಮೈಸೂರು ಸರ್ಕಾರದ ಆತಿಥ್ಯಕ್ಕೆ ಮಣಿದು, ಮರುಳಾಗಿ ಸರ್ಕಾರವನ್ನು ಹೊಗಳುತ್ತಾರೆ. ಸರ್ಕಾರ ಮಾಡುವುದೆಲ್ಲ ತಮ್ಮ ಒಳಿತಿಗಾಗಿಯೇ ಎಂದು ಭಾವಿಸಿಕೊಳ್ಳುವ ಮುಗ್ಧ ಜನ ಬೆಂಗಳೂರು, ಮೈಸೂರು ನಗರಗಳು ವಿದ್ಯುತ್ ಬೆಳಕಿನಿಂದ ಶೋಭಿಸುತ್ತದೆ. ಆದರೆ ನೆರೆಯ ಹಳ್ಳಿಗಳಿಗೆ ವಿದ್ಯುತ್ತೇ ಇಲ್ಲ". ಹೀಗಿರಲು ಇದು ಮಾದರಿ ಸಂಸ್ಥಾನವಾಗಲು ಹೇಗೆ ಸಾಧ್ಯವೆಂದು ಕೆ.ಟಿ. ಭಾಷ್ಯಂ ರವರು ಪ್ರಶ್ನಿಸಿದ್ದಾರೆ.

ಅಂದಿನ ಪರಿಸ್ಥಿತಿಯಲ್ಲಿ ೬೦ ಲಕ್ಷ ಪ್ರಜೆಗಳಲ್ಲಿ ೫೦ ಲಕ್ಷ ಜನರಿಗೆ ಒಂದು ಹೊತ್ತಿನ ಆಹಾರವಿಲ್ಲ. ಕುಡಿಯುವ ನೀರು, ಆಸ್ಪತ್ರೆ, ಈ ಸೌಲಭ್ಯಗಳಿಂದ ರಾಜ್ಯವನ್ನು ಹಾಗೂ ರಾಜರು ಸ್ಥಳೀಯ ಕೈಗಾರಿಕೋದ್ಯಮಿಗಳಿಗೆ ಪ್ರೋತ್ಸಾಹ ನೀಡದೆ, ಕೃಷಿಯ ಬೇಸಾಯಗಾರನ ಅಗತ್ಯತೆಗಳನ್ನು ಪೂರೈಸದೆ, ಕಾರ್ಖಾನೆಗಳಿಗೆ ಮಂಜೂರು ಮಾಡುತ್ತಿದ್ದರೆ. ಹೇಗೆ ತಾನೆ ಮಾದರಿ ರಾಜ್ಯವಾಗಲು ಸಾಧ್ಯ![೨೫] ರಾಷ್ಟ್ರಧ್ವಜವನ್ನು ಮೈಸೂರು ಧ್ವಜದ ಪ್ರತಿಸ್ಪರ್ಧಿ ಎಂಬಂತೆ ಭಾವಿಸಿ ಧ್ವಜಾರೋಹಣಕ್ಕೆ ಅಡ್ಡಿ ಪಡಿಸುವುದು ಮಾದರಿ ಸಂಸ್ಥಾನದ ಲಕ್ಷಣವಾಗುವುದಿಲ್ಲ.

ಮೈಸೂರು ಮಾದರಿ ರಾಜ್ಯವೆಂಬ ಮುಸುಕಿನ ಹಿಂದೆ ಸ್ಥಳೀಯ ರಾಜಕೀಯ ಭಿನ್ನಮತವನ್ನು ನಿರ್ದಾಕ್ಷಿಣ್ಯವಾಗಿ ಹತ್ತಿಕ್ಕಿತು. ರಾಷ್ಟ್ರೀಯ ಕಾಂಗ್ರೆಸ್ಸಿನ ಪ್ರಮುಖ ಧುರೀಣರು ೧೯೩೭ರವರೆಗೂ ಮೈಸೂರು ಮಹಾರಾಜರ ವಂದಿಮಾಗದರಂತಿದ್ದರು. ಮೈಸೂರಿನ ಜನತಂತ್ರ ವಿರೋಧಿ ಸರ್ಕಾರವನ್ನು ಆಗಾಗ ಟೀಕಿಸುತ್ತಿದ್ದುದು ಬಿಳಿಯರ ಹಿಡಿತದಲ್ಲಿದ್ದ ಪತ್ರಿಕೆಗಳು.

ಮಾದರಿ ರಾಜ್ಯವನ್ನು ಕುರಿತು ಜೇಮ್ಸ್ ಮೇನರ್ 'ಮಾದರಿ ರಾಜ್ಯವೆಂಬುದು ಮೈಸೂರು ಆಳರಸರು ಪ್ರಜ್ಞಾಪೂರ್ವಕವಾಗಿ ಬೆಳಿಸಿಕೊಂಡ ಒಂದು ಹುಸಿ ಪ್ರತಿಮೆ' ಎಂಬ ತೀರ್ಮಾನಕ್ಕೆ ಬರುತ್ತಾರೆ.[೨೬] ಆದರೆ ಮೈಸೂರಿನಲ್ಲಾದ ಹಲವಾರು ಉತ್ತಮ ಅಭಿವೃದ್ಧಿ ಕಾರ್ಯಗಳನ್ನು ಅಲ್ಲಗಳೆಯುತ್ತಾರೆ. ಹಾಗೂ ಮೈಸೂರಿನಲ್ಲಿನ ಪ್ರತಿನಿಧಿ ಸಭೆ, ಆರ್ಥಿಕ ಕ್ಷೇತ್ರದ ಪ್ರಗತಿ ಇತ್ಯಾದಿಗಳು ಅವರ ಹಿತಕ್ಕೋಸ್ಕರ ಕಾರ್ಯರೂಪಕ್ಕೆ ತಂದ ಯೋಜನೆಗಳೆಂದು ಪರಿಗಣಿಸುತ್ತಾರೆ.

ಸ್ಪಷ್ಟವಾಗಿಯೇ ಇರುವ ಕಾರಣಗಳಿಗಾಗಿ ಮೈಸೂರು ರಾಜ್ಯದ ರಾಜರುಗಳು ಬಹಳ ಬುದ್ಧಿವಂತಿಕೆಯಿಂದ ತಮಗೊಂದು ಪ್ರಗತಿಶೀಲ ಪ್ರತಿಬಿಂಬವನ್ನು ರೂಪಿಸಿಕೊಂಡರು. ಮೈಸೂರನ್ನು ಮಾದರಿ ಸಂಸ್ಥಾನವೆಂದು ಕರೆಯಲಾಯಿತು. ಗಾಂಧೀಜಿಯಂತಹ ನಾಯಕರೂ ಸಹ ಇದಕ್ಕೆ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ. ಏಕೆಂದರೆ ಭಾರತೀಯರನ್ನು ಸಲಹುವುದು ಪವಿತ್ರ ಕರ್ತವ್ಯವೆಂದು ಹೇಳಿಕೊಳ್ಳುತ್ತಿದ್ದ ಬ್ರಿಟಿಷರಿಗೆ ಕಾಂಗ್ರೆಸ್ ಪಕ್ಷವು ಉತ್ತರ ಕೊಡಬೇಕಾಗಿತ್ತು. ಭಾರತೀಯರಿಗೂ ಕೂಡ ಅವಕಾಶಕೊಟ್ಟರೆ ತಮ್ಮನ್ನು ಸರಿಯಾಗಿ ಆಳ್ವಿಕೆ ಮಾಡಿಕೊಳ್ಳುವ ಸಾಮರ್ಥ್ಯವಿದೆ, ಬೇಕಾದರೆ ಮಾದರಿ ಮೈಸೂರನ್ನು ನೋಡಿ, ಎಂದು ಬ್ರಿಟಿಷರಿಗೆ ಹೇಳಬಹುದಾಗಿತ್ತು. ೧೯೨೯ – ೧೯೩೧ರ ಅವಧಿಯಲ್ಲಿ ಉಂಟಾದ ಆರ್ಥಿಕ ಮುಗ್ಗಟ್ಟು ರೈತರನ್ನು ಕಾರ್ಮಿಕರನ್ನು ಕಾಡಿತು. ತಮ್ಮನ್ನು ರಕ್ಷಿಸಬೇಕಾದ ಸರ್ಕಾರ ಬೇಜವಾಬ್ದಾರಿಯಿಂದ ವರ್ತಿಸುತ್ತಿದ್ದು ಅವರನ್ನು ರೊಚ್ಚಿಗೆಬ್ಬಿಸಿತು. ಅಲ್ಲಲ್ಲಿ ನಡೆದ ಮುಷ್ಕರ, ಪ್ರತಿಭಟನೆಗಳನ್ನು ಸರ್ಕಾರ ಕಡೆಗಣಿಸಿತು ಹಾಗೂ ಹಿಂಸಾತ್ಮಕವಾಗಿ ಹತ್ತಿಕ್ಕಿತು. ಮೈಸೂರಿಗಿದ್ದ ಮಾದರಿ ರಾಜ್ಯವೆಂಬ ಬಿರುದು ನಾಮಕಾವಸ್ಥೆಗೆ ಎಂದು ಜನರಿಗೆ ಅಭಿಪ್ರಾಯ ಮೂಡಿತು. ರಾಜಕಾರಣಿಯ ವಿರುದ್ಧ ಜನಾಭಿಪ್ರಾಯ ರೂಪಿತವಾದಂತೆ ದಮನವೂ ಹೆಚ್ಚಾಯಿತು.

ಈ ಎಲ್ಲ ಮಿತಿಗಳೊಂದಿಗೆ ವಸಾಹತುಕಾಲದ ಮೈಸೂರು ಕಂಡ ಪ್ರಗತಿಯನ್ನು ಸಂಪೂರ್ಣವಾಗಿ ತಿರಸ್ಕರಿಸಲು ಸಾಧ್ಯವಿಲ್ಲ. ಮೈಸೂರು ಆಡಳಿತದ ಸಾಧನೆ ಹಾಗೂ ಪ್ರಗತಿಯನ್ನು ವಸಾಹತುಶಾಹಿ ಮತ್ತು ಸ್ಥಳೀಯ ರಾಜಕೀಯ ಬೆಳವಣಿಗೆಗಳ ಸಂದರ್ಭದಲ್ಲಿ ಕಾಣಬಹುದಾಗಿದೆ. ಮೈಸೂರು ಕೆಲವು ಅಂಶಗಳಲ್ಲಿ ಮಾತ್ರ ಮಾದರಿಯಾಗಿತ್ತೆ ವಿನಃ ರಾಜ್ಯದಲ್ಲಿನ ಎಲ್ಲಾ ಯೋಜನೆಗಳು ಮಾದರಿಯಾಗಿರಲಿಲ್ಲ. ಈ ಯೋಜನೆಗಳ ಹಿಂದೆ ವಸಾಹತುಶಾಹಿಯ ನಿಯಂತ್ರಕ ಶಕ್ತಿ ಬಲಯುತವಾಗಿತ್ತು. ಬೇರೆ ವಿಷಯಗಳಲ್ಲಿ ಮಾದರಿ ರಾಜ್ಯವಾಗಿದ್ದ ಮೈಸೂರು, ಜನಪ್ರಭುತ್ವಕ್ಕೆ ಅಧಿಕಾರವನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಹಾಗಾಗಿ ಇದು ರಾಜಪ್ರಭುತ್ವದಲ್ಲಿ ರಾಜಶಾಹಿಯ ಮಾದರಿಯಾಗಿತ್ತು. ಜನರ ಹಕ್ಕುಗಳಿಗೆ ಮಾದರಿ ಸಂಸ್ಥಾನವಾಗಿರಲಿಲ್ಲ.

## ೨.೩ ಸಂಸ್ಥಾನದ ಆಡಳಿತ ಸ್ವರೂಪ

೧೩೯೯ರಲ್ಲಿ ಯದುರಾಯ ಮತ್ತು ಕೃಷ್ಣರಾಯರಿಂದ ಸ್ಥಾಪಿತವಾದ ಮೈಸೂರು ಒಡೆಯ ಸಂತತಿಯು ಸುಮಾರು ೫೭೦ ವರ್ಷಗಳ ಆಡಳಿತ ನಡೆಸಿತು. ೧೩೯೯ರಿಂದ ೧೭೬೦ರವರೆಗೆ ಒಡೆಯರೆ ಆಳ್ವಿಕೆ ನಡೆಸಿದರೆ, ೧೭೬೦ರಿಂದ ೧೭೯೯ರ ವರೆಗೆ ಮೈಸೂರು ಹೈದರಾಲಿ ಮತ್ತು ಟಿಪ್ಪುವಿನ ಅಡಳಿತಕ್ಕೊಳಪಟ್ಟಿತ್ತು. ಆನಂತರ ೧೭೯೯ರಲ್ಲಿ ಟಿಪ್ಪುವಿನ ಮರಣದ ನಂತರ ಬ್ರಿಟಿಷರು ಮೈಸೂರನ್ನು ಅನೇಕ ಭಾಗಗಳನ್ನಾಗಿ ವಿಂಗಡಿಸಿ ಒಂದು ಭಾಗವನ್ನು ಮೈಸೂರು ಒಡೆಯರಿಗೆ ಕೆಲವೊಂದು ಷರತ್ತುಗಳ ಆಧಾರದ ಮೇಲೆ ಬಿಟ್ಟು ಕೊಟ್ಟರು. ಆದರೆ ೧೮೩೧ರಲ್ಲಿ ನಗರದಂಗೆಯನ್ನು ಹತ್ತಿಕ್ಕುವಲ್ಲಿ ಒಡೆಯರ ಅಸಮರ್ಥತೆಯನ್ನು ಎತ್ತಿ ಹಿಡಿದು ಅವರನ್ನು ಮೂಲೆಗುಂಪಾಗಿ ಮಾಡಿ ಮೈಸೂರನ್ನು ಕಮಿಷನರುಗಳು ಆಳ್ವಿಕೆ ನಡೆಸಿದರು. ೧೮೩೧ರಿಂದ ೧೮೮೧ರ ವರೆಗೆ ಮೈಸೂರು ಸಂಸ್ಥಾನ ಕಮಿಷನರುಗಳ ಆಳ್ವಿಕೆಯಲ್ಲಿ ಪ್ರಗತಿ ಕಂಡಿತು. ೧೮೮೧ರಿಂದ ೧೯೪೭ರ ವರೆಗೆ ಪುನಃ ಬ್ರಿಟಿಷರು ಆಡಳಿತವನ್ನು ಒಡೆಯರಿಗೆ ಬಿಟ್ಟುಕೊಟ್ಟು ಈ ಅವಧಿಯಲ್ಲಿ ಪ್ರಮುಖ ದಿವಾನರುಗಳು ಮೈಸೂರನ್ನು ಯೋಜನಾಬದ್ಧವಾಗಿ ನಿರ್ಮಿಸುವ ಪ್ರಯತ್ನ ಮಾಡಿದರು.

ಮೈಸೂರು ಸಂಸ್ಥಾನವು ಕೃಷಿಯನ್ನೇ ಆಧಾರವಾಗಿಟ್ಟುಕೊಂಡು ಬೆಳೆದಂತಹ ಸಂಸ್ಥಾನವಾಗಿದ್ದು, ಈ ಹಿನ್ನೆಲೆಯಲ್ಲಿಯೇ ಆಡಳಿತ ರೂಪಗೊಂಡಿರುವುದನ್ನು ಕಾಣಬಹುದಾಗಿದೆ. ರಾಜಮನೆತನವು ಆಡಳಿತ ಕೇಂದ್ರೀಕರಣಕ್ಕೆ ಬದಲಾಗಿ ವಿಕೇಂದ್ರೀಕರಣಕ್ಕೆ ಹೆಚ್ಚಿನ ಒತ್ತನ್ನು ನೀಡಿರುವುದನ್ನು ನೋಡಬಹುದಾಗಿದೆ.

ಆಡಳಿತವನ್ನು ಪ್ರಮುಖವಾಗಿ ಕೇಂದ್ರ ಸರ್ಕಾರವು, ಸೀಮೆ, ಸ್ಥಳ, ಗ್ರಾಮ, ಅಗ್ರಹಾರಗಳು ಎಂದು ವಿಭಾಗಿಸಲಾಗಿತ್ತು. ರಾಜ್ಯ ರಾಜಕೀಯದಲ್ಲಿ ರಾಜನು ಸರ್ವಶಕ್ತನಾಗಿದ್ದು, ಒಂದು ಸಲಹಾ ಮಂಡಳಿ ಹಾಗೂ ಸಚಿವಾಲಯಗಳಿದ್ದವು. ಕೌನ್ಸಿಲರುಗಳು ಅನೇಕ ವೇಳೆ ಬ್ರಾಹ್ಮಣರಾಗಿದ್ದರು. ಶಾಸನಗಳಲ್ಲಿ ಜೈನ ಮತ್ತು ಲಿಂಗಾಯಿತ ಮಂತ್ರಗಳ ಉಲ್ಲೇಖವೂ ಇದೆ. ಅನೇಕ ಆಡಳಿತ ವಿಭಾಗಗಳಿದ್ದು ಅವು ಮುಖ್ಯವಾಗಿ ತೆರಿಗೆ ಮತ್ತು ಸೈನ್ಯ ವ್ಯವಹಾರಗಳಿಗೆ ಸಂಬಂಧಪಟ್ಟಿದ್ದವು. ರಾಜಕೀಯ ಹೊರ ರಚನೆಗೆ ಸ್ಥಳೀಯ ತಳಹದಿ ಎಂದರೆ ಪಾಳೆಯಗಾರ ವ್ಯವಸ್ಥೆ. ಪಾಳೆಯಗಾರರು ಸ್ಥಳೀಯವಾಗಿ ಅಧಿಕಾರವನ್ನು ಹಿಡಿಯುತ್ತಿದ್ದರು. ಸಾಮಾನ್ಯವಾಗಿ ಇಪ್ಪತ್ತು ಹಳ್ಳಿಗಳ ಒಂದು ಸಮೂಹಕ್ಕೆ ಮುಖ್ಯಸ್ಥರಾಗಿರುತ್ತಿದ್ದರು. ಇವರ ಬೆಂಬಲವನ್ನು ಪಡೆದು ವಿಶಾಲ ಸಾಮ್ರಾಜ್ಯಗಳು ರೂಪಗೊಳ್ಳಬೇಕಿತ್ತು. ಗೌಡನು ಹಳ್ಳಿಗಳ ನಿರ್ವಹಣೆಯನ್ನು ಹೊತ್ತಿದ್ದನು. ಟಿಪ್ಪು ಮತ್ತು ಹೈದರಾಲಿಯು ಸ್ಥಳೀಯ ಪಾಳೆಯಗಾರರನ್ನು ಅಡಗಿಸಿ ಅಲ್ಲಿನ ಉತ್ಪಾದನೆಯನ್ನು ರಾಜ್ಯಕ್ಕೆ ವಿನಿಯೋಗಿಸಿಕೊಂಡು ಪ್ರಬಲರಾಗಿದ್ದರು.[೨೭]

ಮೈಸೂರು ಸಂಸ್ಥಾನದಲ್ಲಿ ೧೭೯೯ರಿಂದ ೧೮೩೦ರ ವರೆಗಿನ ಆಡಳಿತ ಸ್ಥಿತಿ ಶಿಥಿಲಗೊಂಡಿತ್ತೆನ್ನಬಹುದು. ಟಿಪ್ಪು ಮರಣದ ತರುವಾಯ ಒಡೆಯರ ವಂಶವನ್ನು ಮತ್ತೆ ಸಿಂಹಾಸನದ ಮೇಲೆ ಕೂರಿಸಲಾಯಿತು. ೧೭೯೯ರ ಸಹಾಯಕ ಸೈನ್ಯ ಪದ್ಧತಿಯ ನಿಯಮದಂತೆ ರಾಜನಿಗೆ ಸೀಮಿತ ಅಧಿಕಾರವನ್ನು ಕೊಟ್ಟಿದ್ದರು. ಈ ಒಪ್ಪಂದದ ಪ್ರಕಾರ ಬ್ರಿಟಿಷರು ಮೈಸೂರು ಸಂಸ್ಥಾನದ ರಕ್ಷಣೆಯನ್ನು ನಿರ್ವಹಿಸತೊಡಗಿದರು. ಅದಕ್ಕೆ ಪ್ರತಿಫಲವಾಗಿ ೭ ಲಕ್ಷ ಸ್ಟಾರ್ ಪಗೋಡ (೨೪.೫ ಲಕ್ಷ ರೂಪಾಯಿ)ಗಳ ಸಹಾಯ ಧನವನ್ನು ಅವರಿಗೆ ನೀಡಬೇಕಾಯಿತು. ಈ ಭಾರದ ಜೊತೆಗೆ ಬ್ರಿಟಿಷರಿಗೂ ಬೇರಾವುದೆ ಭಾರತೀಯ ರಾಜ್ಯಕ್ಕೂ ನಡುವೆ ಯುದ್ಧವಾದರೆ ಅನಿರ್ಧಿಷ್ಟ ಮೊತ್ತದ ಹಣವನ್ನು ಸಂಸ್ಥಾನ ಕೊಡಬೇಕಾಗಿದ್ದಿತು. ಕರಾರಿನ ಅತ್ಯಂತ ಮುಖ್ಯವಾದ ೪ನೇಯ ಅನುಚ್ಛೇದದಂತೆ ರಾಜ್ಯವನ್ನು ನೇರವಾಗಿ ತಮ್ಮ ನಿರ್ವಹಣೆಗೆ ತಂದುಕೊಳ್ಳಲು ಬ್ರಿಟಿಷರಿಗೆ ಹಕ್ಕು ಇದ್ದಿತು. ಯುದ್ಧ ಸಮಯದಲ್ಲಾಗಲಿ, ಶಾಂತಿ ಸಮಯದಲ್ಲಾಗಲಿ ಮೇಲೆ ಹೇಳಿದ ಮೊತ್ತವು ಸಮರ್ಪಕವಾಗಿ ತನಗೆ ಒದಗಿಸುವಂತೆ ನೋಡಿಕೊಳ್ಳಲು ಅವರಿಗೆ ಈ ಸೌಲಭ್ಯವನ್ನು ಕಲ್ಪಿಸಲಾಗಿತ್ತು.

ಆಧುನಿಕ ಮೈಸೂರು ಒಡೆಯರಲ್ಲಿ ಪ್ರಮುಖರು ನಾಲ್ವಡಿ ಕೃಷ್ಣರಾಜ ಒಡೆಯರ್. ಇವರ ಆಡಳಿತಾವಧಿಯು ಅತ್ಯಂತ ಪ್ರಮುಖವಾದುದೆಂದೇ ಹೇಳಬಹುದಾಗಿದೆ. ಬ್ರಿಟಿಷರ ನಿಯಂತ್ರಣವಿದ್ದರೂ, ನಾಲ್ವಡಿ ಕೃಷ್ಣರಾಜ ಒಡೆಯರ್ ಆಡಳಿತದ ಕೇಂದ್ರ ಬಿಂದುವಾಗಿದ್ದರು. ಆಡಳಿತವನ್ನು ೨ ಭಾಗಗಳಾಗಿ ಮಾಡಲಾಗಿತ್ತು. ಸಂಸ್ಥಾನದ ಆಡಳಿತ ಮತ್ತು ಅರಮನೆ ಆಡಳಿತ, ಇವೆರಡೂ ಮಹಾರಾಜರ ಹೆಸರಿನಲ್ಲಿಯೇ ನಡೆಯುತ್ತಿತ್ತು. ಈ ಎರಡೂ ಆಡಳಿತಗಳು ಪ್ರತ್ಯೇಕವಾಗಿದ್ದವು. ಮೈಸೂರು ರಾಜಧಾನಿಯಾಗಿದ್ದು, ಬೆಂಗಳೂರು ಆಡಳಿತ ಕೇಂದ್ರವಾಗಿತ್ತು. ಆಡಳಿತ ಕಾರ್ಯಗಳಿಗೆ ಮೈಸೂರಿನಿಂದ ಬೆಂಗಳೂರಿಗೆ ಹೋಗುತ್ತಿದ್ದರು. ಇವರಿಗೆ ನೆರವಾಗಲು ಕಾರ್ಯನಿರ್ವಹಣೆ ಸಭೆ ಅಸ್ತಿತ್ವದಲ್ಲಿತ್ತು. ದಿವಾನರು ಇದರ ಅಧ್ಯಕ್ಷರಾಗಿದ್ದರು. ೨ ಅಥವಾ ೩ ಸದಸ್ಯರನ್ನು ಹೊಂದಿದ್ದ ಈ ಸಭೆ ಪೂರ್ಣಕಾಲದ ಮಂತ್ರಿಮಂಡಲವಾಗಿತ್ತು. ರಾಜರ ನಂತರ ಎಲ್ಲಾ ಅಧಿಕಾರಗಳನ್ನು ದಿವಾನರು ಚಲಾಯಿಸುತ್ತಿದ್ದರು. ಆದರೆ ಕಾನೂನು ರಚನೆ, ಹೊಸ ತೆರಿಗೆ ವಿಧಿಸುವ ಅಥವಾ ರದ್ದುಗೊಳಿಸುವ ಅಧಿಕಾರವಿರಲಿಲ್ಲ. ಈ ಕಾರ್ಯ ನಿರ್ವಹಣೆ ಸಭೆಗೆ ಸಹಾಯಕವಾಗಿ ಸೆಕ್ರೆಟೇರಿಯಲ್ ಇತ್ತು. ಸೆಕ್ರೆಟರಿ, ಅಂಡರ್ ಸೆಕ್ರೆಟರಿ, ಅಸಿಸ್ಟೆಂಟ್ ಸೆಕ್ರೆಟರಿ ಮತ್ತು ಬರಹಗಾರ ನೌಕರರಿಂದ ಕೂಡಿದ್ದು, ಸೆಕ್ರೆಟೇರಿಯಲ್ ಕೇಂದ್ರಾಡಳಿತದ ಕಾರ್ಯಾಲಯವಾಗಿತ್ತು. ೧೯೨೩-೨೪ರಲ್ಲಿ ಪ್ರಮುಖ ಸೆಕ್ರೆಟೇರಿಯಟ್‌ಗಳಿದ್ದವು. ಜನರಲ್ ಅಂಡ್ ರೆವಿನ್ಯೂ, ದಿ ಪಬ್ಲಿಕ್ ವರ್ಕ್ಸ್, ದಿ ಫೈನಾನ್ಸಿಯಲ್, ಮತ್ತು ರೈಲ್ವೆ ಸೆಕ್ರೆಟೇರಿಯಟ್ ಇವೆಲ್ಲವೂ ದಿವಾನರ ನೇರ ಉಸ್ತುವಾರಿಯಲ್ಲಿದ್ದವು. ಇವು ಕಾರ್ಯಾಂಗದ ಕೆಲಸ ನಿರ್ವಹಿಸುತ್ತಿದ್ದವು. ೧೯೦೭ರಲ್ಲಿ ನ್ಯಾಯವಿಧಾಯಕ ಸಭೆ ಅಸ್ತಿತ್ವಕ್ಕೆ ಬಂದು ಇದರ ಮುಖ್ಯ ಕೆಲಸ ಶಾಸನಗಳನ್ನು ರಚಿಸುವುದಾಗಿತ್ತು. ಈ ಹಿಂದೆ ಅಂದರೆ ೧೯೦೭ರವರೆಗೆ ಕಾರ್ಯ

ನಿರ್ವಾಹಕ ಸಭೆಯಲ್ಲಿ ಶಾಸನಗಳನ್ನು ರಚಿಸಿ ಜಾರಿಗೊಳಿಸಲಾಗುತ್ತಿತ್ತು. ಈ ನ್ಯಾಯ ವಿಧಾಯಕ ಸಭೆ ದಿವಾನರ ಉಸ್ತುವಾರಿಯಲ್ಲಿ ಒಟ್ಟು ೬೦ ಸದಸ್ಯರಿಂದ ಕೂಡಿತ್ತು. ವರ್ಷಕ್ಕೆ ೨ ಬಾರಿ ಸಭೆ ಸೇರುತ್ತಿತ್ತು.[೨೮] ೧೮೮೧ರಲ್ಲಿ ಸ್ಥಾಪಿತವಾದ ಪ್ರಜಾಪ್ರತಿನಿಧಿ ಸಭೆ ಹಾಗೂ ನ್ಯಾಯವಿಧಾಯಕ ಸಭೆಗಳೆರಡೂ ಪ್ರಮುಖ ಪಾತ್ರ ವಹಿಸಿದವು.

ಅದೇರೀತಿ ಸ್ಥಳೀಯ ಆಡಳಿತವನ್ನು ಬ್ರಿಟಿಷ್ ಕಮಿಷನರುಗಳಿಂದ ಎರವಲು ಪಡೆದು ಪೋಷಿಸಲಾಯಿತು. ೧೮೩೧ರಿಂದ ಕಮಿಷನರುಗಳ ಆಳ್ವಿಕೆ ಪ್ರಾರಂಭವಾಗಿ, ಇಡೀ ಮೈಸೂರನ್ನು ೩ ಕಂದಾಯ ವಿಭಾಗಗಳಾಗಿ ಮಾಡಿ, ಒಟ್ಟು ೮ ಜಿಲ್ಲೆಗಳಾಗಿ ವಿಂಗಡಿಸಲಾಯಿತು. ಜಿಲ್ಲೆಗಳನ್ನು ತಾಲ್ಲೂಕುಗಳಾಗಿ ನಿರ್ಮಿಸಲಾಯಿತು. ಅಮಲ್ದಾರ್ ತಾಲ್ಲೂಕಿನ ಮುಖ್ಯಾಧಿಕಾರಿಯಾಗಿದ್ದನು. ಹೋಬಳಿಗಳಿಗೆ ಶೇಕ್‌ದಾರ್ ಎಂಬ ಅಧಿಕಾರಿ ಇದ್ದನು. ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಗ್ರಾಮಾಡಳಿತವನ್ನು ಹಾಗೆಯೇ ಉಳಿಸಿಕೊಳ್ಳಲಾಯಿತು ಆದರೆ ಗ್ರಾಮಗೌಡನ ಬದಲಿಗೆ ಪೊಲೀಸ್ ಪಟೇಲನು ನೇಮಕವಾದನು. ಶಾನುಭೋಗ ಪಾರಂಪರಿಕ ಗ್ರಾಮ ಲೆಕ್ಕಾಧಿಕಾರಿಯಾಗಿ ಮುಂದುವರೆದನು. ೧೯೩೦ರ ದಶಕದಲ್ಲಿ ಆದ ಪ್ರಮುಖ ರಾಜಕೀಯ ಸಂಘಟನೆಯಿಂದಾಗಿ ಪ್ರಜಾಪ್ರತಿನಿಧಿ ಸಭೆಯೊಂದಿಗೆ ಜಿಲ್ಲಾ ಬೋರ್ಡ್ ಮತ್ತು ಗ್ರಾಮಪಂಚಾಯ್ತಿ ಸದಸ್ಯರು ಸೇರಿಕೊಂಡು ದೊಡ್ಡ ಜನಪ್ರತಿನಿಧಿಗಳ ಪಡೆಯೇ ನಿರ್ಮಾಣವಾಹಿತು.[೨೯]

ಮೊದಲಿಗೆ ದಿವಾನರಾದ ಪೂರ್ಣಯ್ಯ ಮೈಸೂರಿನ ಆಡಳಿತ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದನು. ದೇಶಾದ್ಯಂತ ಪಾಳೆಯಗಾರರು ಮತ್ತು ನಕಲಿ ಪಾಳೆಯಗಾರರು ತಲೆಯತ್ತಿ ಹೆಚ್ಚುಕಡಿಮೆ ದೇಶದ ಪ್ರತಿಯೊಂದು ಭಾಗವು ತಮ್ಮದೆಂದು ಸಾರುತ್ತಿದ್ದರು. ಆಗ ರಾಜಕೀಯ ಪ್ರಕ್ರಿಯನ್ನು ಹೆಚ್ಚು ಕೇಂದ್ರೀಕೃತವಾದ ಒಂದು ರಾಜಕೀಯ ವ್ಯವಸ್ಥೆಯನ್ನಾಗಿಸತೊಡಗಿದರು. ಪಟೇಲರು, ಪೊಲೀಸ್ ಅಧಿಕಾರಿಗಳು ಹಾಗೂ ಸಮರ್ಥರಾದ ರೈತರಿಗೆ ಹಳ್ಳಿಯ ದಾಖಲೆಗಳಲ್ಲಿ ಅವರದ್ದಲ್ಲದ ಜಮೀನುಗಳಿಗೆ ಪ್ರವೇಶಿಸಲು ಪರವಾನಗಿ ದೊರೆಯಿತು. ಅಸಹಕಾರ ತೋರುತ್ತಿದ್ದ ಅಮೀಲ್ದಾರರನ್ನು ರಹಸ್ಯವಾಗಿ ಹತ್ಯೆಗೆದರು. ಸೈನ್ಯವನ್ನು ಉತ್ತಮಪಡಿಸಿ ಬೆಂಗಳೂರಿನಲ್ಲಿ ನೆಲೆಸಿದ್ದ ಯುರೋಪಿಯನ್ ತುಕಡಿಯಲ್ಲಿ ಒಂದು ಬಂಡಾಯವೆದ್ದಾಗ ಅದನ್ನು ಪೂರ್ಣಯ್ಯನವರೆ ಅಡಗಿಸಿದರು.[೩೦] ಎಲ್ಲಾ ಅಧಿಕಾರವು ದಿವಾನರ ಹಿಡಿತದಲ್ಲಿದ್ದಿತು. ಅವನು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ಪಡೆದಿದ್ದ ಅತ್ಯಂತ ನಿಷ್ಠಾವಂತ ಸೇವಕನಾಗಿದ್ದನು. ಕಾನೂನು ಮತ್ತು ಸುವ್ಯವಸ್ಥೆಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಪಾಲಿಸಲಾಗಿತ್ತು. ಪರೋಕ್ಷ ಆಡಳಿತದೊಂದಿಗೆ ಗೋಚರಿಸುವ ವಿರೋಧ ಪರಿಸ್ಥಿತಿಗಳು ನಿರ್ಮಾಣವಾಗಲಿಲ್ಲ. ೧೮೩೦-೩೧ರ ಬಂಡಾಯವು ಬಹುಮಟ್ಟಿಗೆ ೧೭೯೯ರಲ್ಲಿ ಹಾಗೂ ೧೮೦೨ರಲ್ಲಿ ಕೇಂದ್ರಾಡಳಿತದ ವಿರುದ್ಧವಾಗಿ ಗಡಿಪ್ರಾಂತ್ಯದಲ್ಲಿ ಎದ್ದ ಬಂಡಾಯದ

ಮೂಲವಾಗಿತ್ತು. ಸರ್ಕಾರಕ್ಕೂ, ಪ್ರಜೆಗಳಿಗೂ ಮಧ್ಯೆ ಶಾಸನಬದ್ಧ ಸಂಬಂಧದ ಭದ್ರ ತಳಹದಿ ಇರಲಿಲ್ಲ. ಈ ಸ್ಥಿತಿಯು ಅತಿರೇಕಗೊಂಡು ಕೊನೆಗೆ ಬ್ರಿಟಿಷರು ಅಧಿಕಾರವಹಿಸಿಕೊಳ್ಳುವಂತಾಯಿತು. ಬ್ರಿಟಿಷ್ ಹಿತಾಸಕ್ತಿಗಳಿಗೆ ಎಂದೂ ಹೊಂದಿಕೆಯಾಗದಿದ್ದ ಒಂದು ಸಾಂಪ್ರದಾಯಿಕ ರಾಜತ್ವಕ್ಕೆ ಬದಲಾಗಿ, ಹಿಂಸೆಯನ್ನೆ ಅಂತಿಮ ರಾಜಕೀಯ ಕ್ರಮವಾಗಿ ಹೊಂದಿದ್ದ ಒಂದು ಆಡಳಿತ ವರ್ಗವು ಬ್ರಿಟಿಷರ ನೇರ ಆಳ್ವಿಕೆಯಲ್ಲಿ ರೂಪಗೊಂಡಿತು.

೧೮೩೧ರಿಂದ ೧೮೮೧ರ ವರೆಗೆ ಬ್ರಿಟಿಷ್ ಕಮಿಷನರ ಆಳ್ವಿಕೆಯನ್ನು ಕಾಣಬಹುದಾಗಿದೆ. ಈ ಮಧ್ಯೆ ಮೈಸೂರು ಆಡಳಿತವನ್ನು ನಿರ್ವಹಿಸಿದ ಚೀಫ್ ಕಮಿಷನರ್ ಮಾರ್ಕ್ ಕಬ್ಬನ್ ಹಳೆಯ ಸಾಂಪ್ರದಾಯಿಕ ಪಂಥದ ಪೋಷಕನಾಗಿದ್ದನು. ಕಾರಣ ಆಧುನೀಕರಣದ ಉದಾರವಾದವು ಮೈಸೂರಿಗೆ ತಡವಾಗಿ ಕಾಲಿಟ್ಟಿತು. ದೇಶಿಯ ಸಂಸ್ಥಾನಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದರು. ಆಡಳಿತದಲ್ಲಿ ೬೪ ವಲಯಗಳನ್ನು ಜಾರಿಗೊಳಿಸಿ ಯುರೋಪಿಯನ್ ಅಧಿಕಾರಿಗಳನ್ನು ನೇಮಿಸಿದನು. ಇವನ ಕಾಲದಲ್ಲಿ ಸಂಸ್ಥಾನದ ವರಮಾನವು ದುಪ್ಪಟ್ಟು ಹೆಚ್ಚಾಯಿತು. ಕಾನೂನು ಸುವ್ಯವಸ್ಥೆಯ ಪಾಲನೆ ಮತ್ತು ತೆರಿಗೆ ಸಂಗ್ರಹಣೆಯ ಬಗ್ಗೆಯೇ ಹೆಚ್ಚಿನ ಮುತುವರ್ಜಿವಹಿಸಿದನು. ಶಿಕ್ಷಣ ವ್ಯವಸ್ಥೆಯನ್ನು ಅಲಕ್ಷಿಸಲಾಯಿತು. ಕಬ್ಬನನು 'ಅಧೀನ ರಾಷ್ಟ್ರಗಳು ಅಮೂರ್ತ ತತ್ವಗಳನ್ನು ಕಲಿಯಲು ತಕ್ಕ ಸ್ಥಿತಿಯಲ್ಲಿ ಇಲ್ಲ' ಎಂದು ಭಾವಿಸಿದ್ದನು.[೩೧] ಬೌರಿಂಗ್‌ನ ಅವಧಿಯಲ್ಲಿ ಮೈಸೂರಿನ ಆಡಳಿತವು ಬ್ರಿಟಿಷ್ ಪ್ರಾಂತಗಳಲ್ಲಿ ಇದ್ದ ಮಟ್ಟಕ್ಕೆ ಅನುಗುಣವಾಗಿ ಪುನರ್‌ರಚನೆಗೊಂಡಿತು. ಅನೇಕ ಸಾಮಾಜಿಕ ಕಾರ್ಯಗಳಿಗೆ ಹೆಚ್ಚಿನ ಹಣವನ್ನು ವಿನಿಯೋಗಿಸಿದನು. ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದರಿಂದ ಸಂಸ್ಥಾನದಲ್ಲಿ ಆಧುನಿಕ ಗಣ್ಯವರ್ಗವು ಹುಟ್ಟಿಕೊಂಡಿತು. ರಂಗಾಚಾರ್ಲುರವರು ಲಂಡನ್ನಿನಲ್ಲಿ ಪ್ರಕಟವಾದ ಒಂದು ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ 'ಕೆಲವು ಬ್ರಿಟಿಷ್ ರಾಜ್ಯಗಳಲ್ಲಿ ಇರುವುದಕ್ಕಿಂತ ಹೆಚ್ಚು ಸಂಖ್ಯೆಯ ಇಲಾಖೆಗಳನ್ನು ಹೆಚ್ಚು ವಿಸ್ತಾರವಾದ ಯುರೋಪಿಯನ್ ಸಿಬ್ಬಂದಿಯನ್ನು ಪ್ರಾಂತವು ಹೊಂದಿದೆ'. ಪ್ರತ್ಯಕ್ಷ ಆಡಳಿತದ ಕೊನೆಗೆ ೧೮೭೬ರಿಂದ ೧೮೭೮ರಲ್ಲಿ ಮೈಸೂರು ರಾಜ್ಯವು ಭೀಕರ ಕ್ಷಾಮದಿಂದ ಬರಡಾಗಿತ್ತು. ಕ್ಷಾಮದ ಅನಾಹುತಗಳು ಅಪಾರವಾಗಿದ್ದವು.[೩೨]

ನಂತರ ೧೮೮೧ರಲ್ಲಿ ಮತ್ತೆ ರಾಜರ ಕೈಯಲ್ಲಿ ಆಡಳಿತವು ಸೇರಿತು. ಆಗ ಮೈಸೂರನ್ನು ದೇಶೀಯ ಆಡಳಿತಕ್ಕೆ ಒಳಪಡಿಸಲಾಯಿತು. ಮೈಸೂರು ಆಡಳಿತವನ್ನು ನಿರ್ಮಾಣಗೊಳಿಸಿದ್ದು ವಸಾಹತುಶಾಹಿ ವ್ಯವಸ್ಥೆ. ಮಹಾರಾಜರು ತನ್ನ ರಾಜ್ಯವನ್ನು ದೇಶದೊಳಗಿನ ದೇಶ ಎಂದು ಕರೆದುಕೊಳ್ಳುತ್ತಿದ್ದರು. ಮೈಸೂರಿನ ಆಡಳಿತವನ್ನು ಜನರು ಸೂಕ್ಷ್ಮವಾಗಿ ಗಮನಿಸತೊಡಗಿದಾಗ, ಮಹಾರಾಜನು ವಸಾಹತುಶಾಹಿಯ ಮೇಲೆ ಅವಲಂಬಿತವಾಗುವುದು ಕಡಿಮೆಯಾಯಿತು. ಸ್ಥಳೀಯ ಬ್ರಾಹ್ಮಣರ ಪ್ರಭಾವವನ್ನು ಆಡಳಿತದಲ್ಲಿ

ಮಿತಗೊಳಿಸಲು ಮದರಾಸು ಸಿವಿಲ್ ಸರ್ವಿಸಿನಿಂದ ಆಡಳಿತಾಧಿಕಾರಿಗಳನ್ನು ಕರೆಯಿಸಿಕೊಂಡರು.[೩೩] ಉನ್ನತ ಆಡಳಿತ ಹುದ್ದೆಗಳಲ್ಲಿ ಬ್ರಿಟಿಷರು ಇದ್ದರು. ಮುಖ್ಯವಾದ ಇಲಾಖೆಗಳು ಬ್ರಿಟಿಷರ ನಿಯಂತ್ರಣದಲ್ಲಿದ್ದವು. ನೇರ ಆಡಳಿತದ ಅವಧಿಯಲ್ಲಿ ರೆಸಿಡೆಂಟ್ ಹುದ್ದೆಯನ್ನು ರದ್ದುಗೊಳಿಸಿದರು. ನಂತರ ಮತ್ತೆ ಪುನರ್ ಸ್ಥಾಪಿಸಿದರು. ಕೆಲವು ಸಂದರ್ಭದಲ್ಲಿ ರೆಸಿಡೆಂಟನು ಮೈಸೂರು ಸಂಸ್ಥಾನವನ್ನು ಪ್ರತಿನಿಧಿಸುತ್ತಿದ್ದನೋ ಅಥವಾ ಬ್ರಿಟಿಷ್ ಚಕ್ರವರ್ತಿಯನ್ನೋ ಎಂಬುದು ತಿಳಿಯುವಂತಿರಲಿಲ್ಲ. ರೆಸಿಡೆಂಟನು ಬೆಂಗಳೂರಿನಲ್ಲಿದ್ದ ಸಿವಿಲ್ ಮತ್ತು ಮಿಲಿಟರಿ ಇಲಾಖೆಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಹಾಗೂ ಕೊಡಗು ಪ್ರಾಂತದ ಚೀಫ್ ಕಮಿಷನರ್ ಆಗಿದ್ದನು.

ಹೀಗೆ ಒಡೆಯರ ಸಂಸ್ಥಾನದ ಆಡಳಿತವು ವಿವಿಧ ಮಜಲುಗಳಿಂದ ಕೂಡಿದ್ದು ಒಂದೊಂದು ಆಡಳಿತಾವಧಿಯಲ್ಲಿ ಒಂದೊಂದು ರೀತಿಯ ಬದಲಾವಣೆ, ಪ್ರಗತಿ, ದಬ್ಬಾಳಿಕೆಯನ್ನು ಕಂಡಿದೆ. ಟಿಪ್ಪುವಿನ ಪತನದ ಬಳಿಕ ಮೈಸೂರು ಬ್ರಿಟಿಷರಿಗೆ ಶರಣಾಗುವುದರೊಂದಿಗೆ ತನ್ನತನವನ್ನು ಕಳೆದುಕೊಂಡರೂ, ಬ್ರಿಟಿಷ್ ಆಳ್ವಿಕೆಯನ್ನು ಒಪ್ಪಿಕೊಂಡು ಆಶ್ರಿತ ಸಂಸ್ಥಾನವಾಗುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತು. ಇದೊಂದು ದಾಸ್ಯರೂಪಿ ಸಂಬಂಧವಾಗಿದ್ದರೂ ಮಾದರಿ ಸಂಸ್ಥಾನವೆಂಬ ಮುಖವಾಡವನ್ನು ಹಾಕಿಕೊಳ್ಳುವುದರ ಮೂಲಕ ಪ್ರಗತಿಯತ್ತ ಹೆಜ್ಜೆಹಾಕಿತು. ಮೈಸೂರಿಗರು ಸುಧಾರಣೆಗಳನ್ನು ಬೆಂಬಲಿಸಿದರಾದರೂ ಮಹಾರಾಜರ ಆಳ್ವಿಕೆಯಡಿಯಲ್ಲಿಯೇ ಗುರುತಿಸಿಕೊಳ್ಳಲು ಇಷ್ಟಪಡಲಿಲ್ಲ.

**ಕೊನೆಟಿಪ್ಪಣಿಗಳು**


೧. ಅನಿಲ್ ಸೆಕ್ಸೆನಾ., **ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಹಿಸ್ಟರಿ**, ಸಂಪುಟ–೧೭, ಪು.೭೮

೨. ಕಾಯ್ ಡಬ್ಲ್ಯೂ.ಜೆ., **ದಿ ಅಡ್‌ಮಿನಿಸ್ಟ್ರೇಷನ್ ಆಫ್ ದ ಈಸ್ಟ್ ಇಂಡಿಯಾ ಕಂಪನಿ**, ಲಂಡನ್, ೧೮೫೩, ಪು. ೮೭

೩. ರಾಮಕೃಷ್ಣ ಜಿ(ಸಂ.), **ಹೊಸತು**(ಮಾಸ ಪತ್ರಿಕೆ.), ಮೇ,೨೦೦೮, ಪು.೪೧

೪. ರಾಮಕೃಷ್ಣ ಜಿ(ಸಂ.), ಮೇಲಿನದೇ, ಪು.೪೩

೫. ಮುಜುಂದಾರ್ ಆರ್.ಸಿ (ಸಂ.), **ಸ್ವಾತಂತ್ರ್ಯ ಸಂಗ್ರಾಮ**, ಪು.೨೦೪

೬. ಗೋಪಾಲ್ ಎಂ.ಎಚ್., **ಟಿಪ್ಪು ಸುಲ್ತಾನ್ಸ್ ಮೈಸೂರು**, ಪು. ೫೯

೭. ಹ್ಯಾಮಿಲ್ಟನ್ ಸಿ.ಜೆ., **ದಿ ಟ್ರೇಡ್ ರಿಲೇಷನ್ಸ್ ಬಿಟ್‌ವೀನ್ ಇಂಗ್ಲೆಂಡ್ ಅಂಡ್ ಇಂಡಿಯಾ**, ಕಲ್ಕತ್ತ, ೧೯೧೯, ಪು. ೧೦೭

೮. ಹಯವದನ್ ರಾವ್ ಸಿ., **ಮೈಸೂರು ಗೆಜೆಟಿಯರ್**, ಭಾಗ–೪, ೧೯೩೦, ಪು. ೯೪

೯. ಮೋಹನ್‌ಕೃಷ್ಣ ರೈ ಕೆ., **ವಸಾಹತುಶಾಹಿ ಮತ್ತು ನಗರೀಕರಣ**, ೨೦೦೭, ಪು. ೧೨–೧೪

೧೦. ಹೆಟ್ನೆ ಬ್ಯೋರ್ನ್., **ದಿ ಪೊಲಿಟಿಕಲ್ ಎಕನಮಿ ಆಫ್ ಇನ್‌ಡೈರೆಕ್ಟ್ ರೂಲ್ ಮೈಸೂರು**, ೧೯೭೮, ಪು. ೨೫೫

೧೧. ಮೋಹನ್‌ಕೃಷ್ಣ ರೈ ಕೆ., ಮೇಲಿನದೇ, ಪು. ೧೫

೧೨. ಸೆಬಾಸ್ಟಿಯನ್ ಜೋಸೆಫ್ (ಸಂ.), **ಕರ್ನಾಟಕ ಚರಿತ್ರೆ** ಸಂಪುಟ–೬, ಪು.೨೮

೧೩. ಸೆಬಾಸ್ಟಿಯನ್ ಜೋಸೆಫ್., **ಸ್ಟೇಟ್ ಟ್ರೇಡ್ ಎಂಡ್ ಪ್ರೀ ಕಲೋನಿಯಲ್ ಎಕನಾಮಿಕ್ ಸ್ಟ್ರಕ್ಚರ್ ಆಫ್ ಮಲಬಾರ್**, ಐಹೆಚ್‌ಸಿ, ೧೯೯೨, ಪು. ೫೩೮–೪೫

೧೪. ಮೋಹನ್‌ಕೃಷ್ಣ ರೈ., ಮೇಲಿನದೇ, ಪು. ೩

೧೫. ಅದೇ, ಪು. ೪

೧೬. ತಂಬಂಡ್ ವಿಜಯ್ ಪೂಣಚ್ಚ (ಸಂ.), **ಚರಿತ್ರೆ ವಿಶ್ವಕೋಶ**, ೨೦೦೧, ಪು. ೧೭೨–೧೭೪

೧೭. ಚಿನ್ನಸ್ವಾಮಿ ಸೋಸಲೆ ಎನ್., **ನಾಲ್ವಡಿ ಕೃಷ್ಣನ ಮೈಸೂರು**, ೨೦೦೫, ಪು. ೮೪

೧೮. **ಹ್ಯಾಂಡ್ ಬುಕ್ ಆಫ್ ಮೈಸೂರು ಆಡ್ಮಿನಿಸ್ಟ್ರೇಷನ್**, ಪು. ೧೫೩

೧೯. ಅದೇ, ಪು. ೧೮೪

೨೦. ಚಿನ್ನಸ್ವಾಮಿ ಸೋಸಲೆ ಎನ್., ಮೇಲಿನದೇ, ಪು. ೪೮–೪೯

೨೧. ನಟರಾಜ್ ಎಸ್.ವಿ., **ಸೆಂಚುರಿ ಆಫ್ ಸೋಷಿಯಲ್ ರಿಫಾರ್ಮ್ ಇನ್ ಇಂಡಿಯಾ**, ೧೯೫೯, ಪು. ೮೮-೧೧೦

೨೨. ದಿ **ಮೈಸೂರು ಬ್ಲೂಬುಕ್ ಜರ್ನಲ್ಸ್**, ಸಂಪುಟ- ೪, ಪು. ೩೯

೨೩. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು**, ೨೦೦೨, ಪು. ೧೧೫

೨೪. ಉದಾಹರಣೆಗೆ : **ನಾಗೈ ನೀಲಲೋಚನೆ** (ನಾಗಪಟ್ನಂ ವಾರ ಪತ್ರಿಕೆ)

೨೫. ನಾರಾಯಣ ರಾವ್ ವಿ.ಎಸ್., **ಕೆ.ಟಿ.ಭಾಷ್ಯಂ ಅಯ್ಯಂಗಾರ್** (ಜೀವನ ಚರಿತ್ರೆ), ಪು. ೨೭-೨೯

೨೬. ಚಂದ್ರಶೇಖರ್ ಎಸ್., **ವಸಾಹತುಕಾಲೀನ ಕರ್ನಾಟಕ**, ೨೦೦೭, ಪು. ೩೦

೨೭. ಚಿನ್ನಸ್ವಾಮಿ ಸೋಸಲೆ ಎನ್., **ಸಾಮ್ರಾಜ್ಯ ಮತ್ತು ಸಂಸ್ಥಾನ**, ೨೦೦೪, ಪು. ೨೩೮-೨೩೯

೨೮. ಅದೇ, ಪು. ೨೪೨

೨೯. ಹಯವದನ್ ರಾವ್ ಸಿ., **ಮೈಸೂರು ಗೆಜೆಟಿಯರ್** ಸಂಪುಟ-೩, ಪು. ೩೦೭

೩೦. ಸೆಬಾಸ್ಟಿಯನ್ ಜೋಸೆಫ್ (ಸಂ.), **ಕರ್ನಾಟಕ ಚರಿತ್ರೆ** ಸಂಪುಟ-೬, ಪು. ೨೯೭-೨೯೮

೩೧. ಅದೇ, ಪು. ೩೦೧

೩೨. ಅದೇ, ಪು. ೩೦೨

೩೩. **ಮೈಸೂರು ಸ್ಟೇಟ್ ಪೇಪರ್ಸ್**, ಸಂಪುಟ-೨, ಪು. ೯೭

* * *

## ಅಧ್ಯಾಯ – ೩

# ಪ್ರಜಾಪ್ರತಿನಿಧಿ ಸಭೆ

೩.೧ ರಚನೆ

೩.೨ ಉದ್ದೇಶ

೩.೩ ಸಾಧನೆ

೩.೪ ಮಿತಿಗಳು

ಅಧ್ಯಾಯ ೩

# ಪ್ರಜಾಪ್ರತಿನಿಧಿ ಸಭೆ

೧೮೩೧ರಿಂದ ೧೮೮೧ರ ವರೆಗೆ ಬ್ರಿಟಿಷ್ ಕಮಿಷನರ ಆಳ್ವಿಕೆಗೆ ಒಳಪಟ್ಟಿದ್ದ ಮೈಸೂರು ಸಂಸ್ಥಾನ ೧೮೮೧ರಲ್ಲಿ ಮತ್ತೆ ಅನೇಕ ಕರಾರುಗಳೊಂದಿಗೆ ಒಡೆಯರ ಆಳ್ವಿಕೆಗೆ ಒಳಪಟ್ಟಿತು. ಆ ಸಮಯಕ್ಕೆ ಬ್ರಿಟನ್ನಿನಲ್ಲಿ ಚುನಾವಣೆ ನಡೆದು ಉದಾರ ಪಂಥಿಗಳು ಎನಿಸಿದ ಲಿಬರಲ್ ಪಕ್ಷದವರು ಸರ್ಕಾರದ ಹೊಣೆಹೊತ್ತರು. ಗ್ಲಾಡ್‌ಸ್ಟನ್ ಪ್ರಧಾನಿಯಾದರು. ಆ ಪಂಥದವರೇ ಆದ ಲಾರ್ಡ್ ರಿಪ್ಪನ್ ಭಾರತದ ವೈಸ್‌ರಾಯ್ ಮತ್ತು ಗೌರ್ನರ್ ಜನರಲ್ ಆಗಿ ಅಧಿಕಾರ ಸ್ವೀಕರಿಸಿದರು. ಉದಾರ ಪಂಥಿಯರು ಭಾರತದ ಆಡಳಿತದಲ್ಲೂ ತಮ್ಮ ಉದಾರ ನೀತಿಯನ್ನು ಅನುಸರಿಸಿದರು. ದಿವಾನ್ ರಂಗಾಚಾರ್ಲು ಉದಾರ ರಾಜನೀತಿ ತತ್ವಕ್ಕನುಸಾರವಾಗಿ ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆಗೆ ಅಸ್ತಿಭಾರ ಹಾಕಿದರು.

## ೩.೧ ರಚನೆ

೧೮೮೧ರ ಮಾರ್ಚ್ ೨೫ರಂದು ಹತ್ತನೆ ಚಾಮರಾಜ ಒಡೆಯರ ಪಟ್ಟಾಭಿಷೇಕ ಮಹೋತ್ಸವದಲ್ಲಿ ಹಾಜರಾಗಲು ರಾಜ್ಯದ ಎಲ್ಲ ಭಾಗಗಳಿಂದ ಜನರನ್ನು ಆಹ್ವಾನಿಸಲಾಗಿತ್ತು. ಅವರೆಲ್ಲ ಹಿಂದಿರುಗುವ ಮುನ್ನ ಅಲ್ಲಿ ಸೇರಿದ್ದ ಸರ್ಕಾರಿ ಅಧಿಕಾರಿಗಳು, ರೈತರು ಮತ್ತು ವರ್ತಕರೊಡನೆ ಸಾರ್ವಜನಿಕ ವಿಷಯಗಳ ಬಗ್ಗೆ ಚರ್ಚೆ ಮಾಡಲು ದಿವಾನ್ ರಂಗಾಚಾರ್ಲು ಉದ್ದೇಶಿಸಿದರು. ಇದರಂತೆ ಅವರೆಲ್ಲರೂ ಮಾರ್ಚ್ ೨೯ನೇ ತಾರೀಖು ಬೆಳಿಗ್ಗೆ ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಮಾವೇಶಗೊಂಡರು.[೧] ಆಗ ದಿವಾನರು ಮಾತನಾಡಿ "ಮಹಾರಾಜರು ತಮ್ಮ ಆಡಳಿತವು ಜನರ ಮತ್ತು ದೇಶದ ಅಭ್ಯುದಯಕ್ಕೆ ಅನುಕೂಲಕರವಾಗಿರಬೇಕೆಂದು ಇಚ್ಛಿಸಿರುವುದಾಗಿ ತಿಳಿಸಿದರು. ಸಂಸ್ಥಾನದಲ್ಲಿ ಆಡಳಿತದ ಕೀರ್ತಿ ಮತ್ತು ಅಪಕೀರ್ತಿ ಸಂಪೂರ್ಣವಾಗಿ ಅಧಿಕಾರಿಗಳನ್ನೇ ಅವಲಂಬಿಸಿರುವುದೆಂದು ಅವರುಗಳ ಬೆಂಬಲ ಮತ್ತು ಸಹಕಾರದೊಡನೆ ತಾವು ಮಹಾರಾಜರ ಆಳ್ವಿಕೆಯನ್ನು ಯಶಸ್ವಿಯಾಗಿಸಲು ಸಹಕರಿಸಬೇಕೆಂದು ದಿವಾನರು ಹೇಳಿದರು".[೨]

ಈ ಸಮಾಲೋಚನಾ ಸಭೆಯನ್ನು ಬ್ರಿಟಿಷ್ ಸರ್ಕಾರ ಒಪ್ಪದಿದ್ದರೂ, ಮಹಾರಾಜರು ಅದರಿಂದ ಎದೆಗುಂದದೇ ತಾವು ಸರ್ಕಾರವನ್ನು ವಹಿಸಿಕೊಂಡ ದಿನದಿಂದಲೆ ಆ ಉದ್ದೇಶಕ್ಕಾಗಿ ಕಾರ್ಯಪ್ರವೃತ್ತರಾದರು. ಕೃಷ್ಣರಾಜ ಒಡೆಯರ ಕಾಲದಲ್ಲಿ ಜನರ ಇಚ್ಚೆಗೆ ವಿರುದ್ಧವಾದ ಕ್ರಮಗಳನ್ನು ಕಾಠಿಣ್ಯದಿಂದ ಜಾರಿಗೊಳಿಸಿ ಅದರಿಂದ ಅತೃಪ್ತಿ ಅಸಮಧಾನಗಳುಂಟಾಗಿ ಕಡೆಗೆ ಮಹಾರಾಜರ ಆಳ್ವಿಕೆಯೇ ಕೊನೆಗೊಂಡಿದ್ದರಿಂದ ಈ ಕ್ರಮ ಈಗ ಅವಶ್ಯಕವಿತ್ತು. ಪ್ರಜೆಗಳಿಂದ ಬೇರ್ಪಟ್ಟ ಸರ್ಕಾರದಿಂದ ಅನೇಕ ತೊಡಕುಗಳು ಇರುತ್ತವೆಂದು ಅವರಿಗೆ ಮನವರಿಕೆಯಾಗಿತ್ತು. ಮಹಾರಾಜರು ಮತ್ತು ದಿವಾನರು ಮುಂದೆ ಇಂತಹ ಸಂದರ್ಭ ಉಂಟಾಗದಂತೆ ನಿವಾರಿಸಲು ಪ್ರಯತ್ನಿಸಿ ಪ್ರಜೆಗಳ ಕುಂದುಕೊರತೆಗಳನ್ನು ಧಾರಾಳವಾಗಿ ವ್ಯಕ್ತಪಡಿಸಲಾಗುವಂತಹ ಸಭೆಯ ರಚನೆಗಾಗಿ ಆಲೋಚಿಸಿದರು. ಸಂಸ್ಥಾನದ ಆಡಳಿತಕ್ಕಾಗಿ ಕೈಗೊಳ್ಳಲಾಗುವ ಕ್ರಮಗಳನ್ನು ಜನತೆ ತಿಳಿದುಕೊಂಡು ಸರಿಯಾಗಿ ವಿವೇಚಿಸಬೇಕೆಂದು ಅವರು ಬಯಸಿದರು. ಆ ರೀತಿಯಲ್ಲಿ ಸರ್ಕಾರದ ಕಾರ್ಯಗಳನ್ನು ಜನರ ಹಿತದೊಡನೆ ಹೆಚ್ಚಾಗಿ ಹೊಂದಿರಬೇಕೆಂದು ಅಪೇಕ್ಷಿಸಿದರು.

೧೮೮೧ ಆಗಸ್ಟ್ ೨೫ರಂದು ಒಂದು ಆದೇಶವನ್ನು ಹೊರಡಿಸಿ ಅಂತಹ ಸಭೆಯ ಸ್ವರೂಪ ಮತ್ತು ಕರ್ತವ್ಯಗಳನ್ನು ವಿವರಿಸಲಾಯಿತು. ಅದು ಈ ಕೆಳಗಿನಂತಿದೆ.

"ಸಂಸ್ಥಾನದ ಆಡಳಿತಕ್ಕಾಗಿ ಅನುಸರಿಸುವ ಕ್ರಮಗಳು ಜನರ ಹಿತಕ್ಕೆಂದು ಅವುಗಳಲ್ಲಿ ಸರ್ಕಾರದ ಅಭಿಪ್ರಾಯ ಮತ್ತು ಗುರಿಗಳನ್ನು ಜನರು ಸರಿಯಾಗಿ ತಿಳಿದು ಒಪ್ಪಬೇಕೆಂದು ಮಹಾರಾಜರು ಅಪೇಕ್ಷಿಸುತ್ತಾರೆ. ಈ ಉದ್ದೇಶ ಸಾಧನೆಯ ಪ್ರಾರಂಭವಾಗಿ ಸಂಸ್ಥಾನದ ಎಲ್ಲಾ ಭಾಗಗಳಲ್ಲಿನ ಜಮೀನುದಾರರು ಹಾಗೂ ವರ್ತಕ ಪ್ರತಿನಿಧಿಗಳು ವರ್ಷಕ್ಕೊಮ್ಮೆ ಸಭೆ ಸೇರಬೇಕೆಂದು ಮಹಾರಾಜರು ತಿಳಿಸಿದ್ದಾರೆ. ಸದ್ಯದಲ್ಲಿ ವಿವಿಧ ಜಿಲ್ಲೆಯ ಸ್ಥಳೀಯ ನಿಧಿಮಂಡಳಿಗಳು ತಮ್ಮ ಪೈಕಿ ಮತ್ತು ಜಿಲ್ಲೆಯ ಇತರರಲ್ಲಿ ಆಯಾ ಜಿಲ್ಲೆಗಳನ್ನು ಈ ಸಭೆಯಲ್ಲಿ ಪ್ರತಿನಿಧಿಸಬೇಕಾದವರನ್ನು ಆರಿಸಲು ಕೇಳಲಾಗುವುದು. ಎಲ್ಲಾ ತಾಲ್ಲೂಕುಗಳ ಕೃಷಿಕರನ್ನು, ವ್ಯಾಪಾರ ವರ್ಗವನ್ನು ಪ್ರತಿನಿಧಿಸಲು ಪ್ರತಿಯೊಂದು ತಾಲ್ಲೂಕಿನಿಂದ ಜನರಲ್ಲಿ ಪ್ರಭಾವಿಗಳಾದ ಮತ್ತು ವ್ಯವಹಾರ ಜ್ಞಾನವನ್ನು ಹೆಚ್ಚಾಗಿ ಹೊಂದಿರುವ ಹಾಗೂ ವ್ಯವಸಾಯ ಮಾಡುವ ಒಬ್ಬಿಬ್ಬರು ಭೂ ಮಾಲಿಕರನ್ನು ಅಲ್ಲದೇ ಸಾಮಾನ್ಯವಾಗಿ ಪ್ರತಿ ಜಿಲ್ಲೆಗೆ ಮೂವರು ಅಥವಾ ನಾಲ್ವರು ಪ್ರಮುಖ ವರ್ತಕರನ್ನು ಕಳುಹಿಸಿಕೊಡಬೇಕು ಎಂದು ಆದೇಶ ಹೊರಡಿಸಿದರು.[೩]

ಹೀಗೆ ೧೮೮೧ರ ಆಗಸ್ಟ್ ೨೫ರ ಕಾರ್ಯಾಂಗ ಆದೇಶವೊಂದರಿಂದ 'ಪ್ರಜಾ ಪ್ರತಿನಿಧಿ ಸಭೆ'ಯನ್ನು ರಚಿಸಲಾಯಿತು. ಈ ಸಭೆಯ ಅಧಿಕೃತ ಹೆಸರು "ಮೈಸೂರು ರಾಜ್ಯದ ಎಲ್ಲಾ ತಾಲ್ಲೂಕುಗಳ ರೈತರ ಮತ್ತು ವರ್ತಕರ ಪ್ರತಿನಿಧಿ ಸಭೆ". ಮೈಸೂರು ಪ್ರಜಾ ಸಮೂಹದ ಮೇಲೆ ಹಿಡಿತವಿದ್ದ ವರ್ಗಗಳಿಗೆ ಮಾತ್ರ ಸದಸ್ಯತ್ವವನ್ನು ಕಲ್ಪಿಸಲಾಗಿತ್ತು.[೪] ಅದು ದಸರಾ ಉತ್ಸವ ಮುಗಿದ ಕೂಡಲೇ ಮೈಸೂರಿನಲ್ಲಿ ಪ್ರತಿ ವರ್ಷ ಸಮಾವೇಶಗೊಳ್ಳುತ್ತಿತ್ತು. ಅದರಂತೆ ೧೮೮೧ರ

ಅಕ್ಟೋಬರ್ ೭ರಂದು ಮೊದಲ ಸಮಾವೇಶ ಮೈಸೂರಿನಲ್ಲಿ ಏರ್ಪಟ್ಟಿತು. ಆಗ ೧೪೪ ಸದಸ್ಯರಿದ್ದರು.[೫] ಬ್ರಿಟಿಷ್ ಭಾರತದಲ್ಲಿನ ನ್ಯಾಯವಿದಾಯಕ ಮಂಡಳಿಗಳಂತೆ ಅದು ನಾಮಕರಣ ಮಾಡಲ್ಪಟ್ಟ ಸಭೆಯಾಗಿ ಆರಂಭವಾಯಿತು. ಅದೊಂದು ಶಾಸನಬದ್ಧ ಸಂಸ್ಥೆಯಲ್ಲದಿದ್ದರೂ ಪ್ರತಿನಿಧಿ ಪ್ರಭುತ್ವದ ದಿಶೆಯಲ್ಲಿ ಪ್ರಥಮ ಹೆಜ್ಜೆಯಾಗಿತ್ತು. ಅದು ಲಾರ್ಡ್ ರಿಪ್ಪನ್ನನ ವೈಸ್‌ರಾಯತ್ವದ ಕಾಲದಲ್ಲಿ ಬ್ರಿಟಿಷ್ ಭಾರತದಲ್ಲಿ ಕೈಗೊಳ್ಳಲಾದ ಸ್ಥಾನೀಯ ಸ್ವಯಂ ಆಡಳಿತ ನಿಬಂಧನೆಗೆ ಮಾರ್ಗದರ್ಶಕವಾಯಿತೆಂದು ಹೇಳಲಾಗಿದೆ.[೬]

ದಿವಾನ್ ರಂಗಾಚಾರ್ಲುರವರ ಉದಾರನೀತಿ ತತ್ವಕ್ಕನುಸಾರವಾಗಿ ಮೈಸೂರು ಸಂಸ್ಥಾನದಲ್ಲಿ ಸ್ಥಾಪನೆ ಮಾಡಿದ ಪ್ರಜಾಪ್ರತಿನಿಧಿ ಸಭೆಗೆ ಬ್ರಿಟಿಷ್ ರೆಸಿಡೆಂಟ್ ಗೋರ್ಡನ್‌ರವರು ಹಾಗೂ ವೈಸ್‌ರಾಯ್ ಒಪ್ಪಿಗೆ ಇತ್ತರು. ಹಾಗೂ ಪಾರ್ಲಿಮೆಂಟ್ ಸದಸ್ಯ ಕೀಲ್ ಹಾರ್ಡಿರವರು ಶ್ಲಾಘನೆ ಮಾಡಿದರು.[೭] ಈ ಸಭೆಯು ಮೈಸೂರು ಸಂಸ್ಥಾನದಲ್ಲಿ ಒಳ್ಳೆಯ ಪರಿಣಾಮ ಉಂಟುಮಾಡಿದ್ದಲ್ಲದೇ, ಆಳುವವರು ಮತ್ತು ಆಳ್ವಿಕೆಗೆ ಒಳಗಾದವರನ್ನು ಒಂದೇ ವೇದಿಕೆಯಲ್ಲಿ ಹತ್ತಿರ ಸೇರಿಸಿತು.

## ೩.೨ ಉದ್ದೇಶ

ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿದ ಉದ್ದೇಶವನ್ನು ದಿವಾನ್ ರಂಗಚಾರ್ಲು ರವರ ಭಾಷಣದಿಂದ ತಿಳಿಯಬಹುದಾಗಿದೆ. "ಇಂದಿನ ಪರಿಸ್ಥಿತಿಯಲ್ಲಿ ಸದ್ಯಕ್ಕೆ ರಾಜ್ಯದ ಜನರಲ್ಲಿ ಜ್ಞಾನೋದಯವಾಗುವಂತೆ ಮಾಡಿ ಅವರನ್ನು ಕಾರ್ಯಶೀಲರನ್ನಾಗಿ ಮಾಡಬೇಕಾಗಿದೆ. ಮತ್ತು ಸರ್ಕಾರ ಹಾಗೂ ಜನತೆಯ ನಡುವೆ ಉಂಟಾಗಬಹುದಾದ ಯಾವುದೇ ಅನುಮಾನಗಳನ್ನು ನಿವಾರಿಸಿ, ಆಡಳಿತ ಜನಹಿತಕ್ಕಾಗಿ ಕೆಲಸ ಮಾಡುತ್ತಿದೆಯೆಂದು ತಿಳಿಸುವುದಕ್ಕಾಗಿ"[೮] ಎಂದು ಹೇಳಿದರು.

ಅದೇ ರೀತಿ ಪ್ರಜಾಪ್ರತಿನಿಧಿ ಸಭೆಯನ್ನು ಅಸ್ತಿತ್ವಕ್ಕೆ ತಂದ ೧೮೮೧ರ ಸರ್ಕಾರ ಆಜ್ಞೆಯ ಉದ್ದೇಶಗಳು ಈ ಕೆಳಗಿನಂತಿವೆ.

೧. ಸರ್ಕಾರದ ಅಭಿಪ್ರಾಯಗಳು ಮತ್ತು ಕ್ರಮಗಳು ಜನತೆಯ ಹಿತವನ್ನು ಬಯಸುತ್ತವೆ. ಆ ಜನತೆ ಅವನ್ನು ಇನ್ನೂ ಚೆನ್ನಾಗಿ ತಿಳಿದುಕೊಳ್ಳುವಂತೆ ಮತ್ತು ಒಪ್ಪಿಕೊಳ್ಳುವಂತೆ ಮಾಡುವುದು.

೨. ಇಂತಹ ಅಭಿಪ್ರಾಯಗಳು ಮತ್ತು ಕ್ರಮಗಳ ಬಗೆಗೆ ಜನತೆಗಿರಬಹುದಾದ ತಪ್ಪು ಗ್ರಹಿಕೆಗಳನ್ನು ದೂರ ಮಾಡಲು ಸದಸ್ಯರಿಗೆ ಸರ್ಕಾರದೊಂದಿಗೆ ನಿಕಟ ಸಂಪರ್ಕ ಕಲ್ಪಿಸುವುದು.

೩. ಸರ್ಕಾರ ಮತ್ತು ಜನತೆಯ ಹಿತಾಸಕ್ತಿಗಳಲ್ಲಿ ವ್ಯತ್ಯಾಸವಿಲ್ಲ. ಅದು ಒಂದೇ ಎಂದು ಸದಸ್ಯರಿಗೆ ಮನದಟ್ಟು ಮಾಡಿಕೊಡುವುದು.[೯]

ಈ ಸಭೆಯನ್ನು ಸ್ಥಾಪಿಸಲು ಸಂಸ್ಥಾನದ ಪ್ರಜೆಗಳ ಬೇಡಿಕೆಯಾಗಲಿ, ಅಥವಾ ಮಹಾರಾಜರಿಗೆ ತಮ್ಮ ಆಡಳಿತಾಧಿಕಾರವನ್ನು ಪ್ರಜೆಗಳೊಂದಿಗೆ ನಡೆಸಬೇಕೆಂದು ಉದ್ದೇಶವಾಗಲಿ ಇರಲಿಲ್ಲ. ಇದರ ಸ್ಥಾಪನೆಗೆ ಅನೇಕ ಉದ್ದೇಶಗಳಿವೆ. ೧೮೩೧ರಲ್ಲಿ ನಡೆದ ನಗರ ದಂಗೆಯು ಪ್ರಜೆಗಳು ಮತ್ತು ಸರ್ಕಾರದ ವಿರುದ್ಧ ನಡೆದು ಒಡೆಯರ ಅಧಿಕಾರವನ್ನು ಸಾಮ್ರಾಜ್ಯಶಾಹಿಗಳ ಹಿಡಿತಕ್ಕೆ ಸೇರಿಸಿತ್ತು. ಕೊನೆಗೆ ಮಹಾರಾಜರು ಆಡಳಿತದಲ್ಲಿ ಸ್ಥಳೀಯರು ಪಾಲ್ಗೊಳ್ಳುವಂತೆ ಮಾಡಬೇಕು. ಹಾಗೂ ಬ್ರಿಟಿಷ್ ನೀತಿ ಮತ್ತು ಕಟ್ಟಳೆಯ ಮಿತಿಯೊಳಗೆ ಕೆಲಸ ನಿರ್ವಹಿಸುವಂತಹ ಸಭೆಯನ್ನು ಸ್ಥಾಪಿಸಲು ಮುಂದಾಗಿ ಅಧಿಕಾರವಿಲ್ಲದ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿ, ಬ್ರಿಟಿಷರ ಮತ್ತು ಪ್ರಜೆಗಳ ಮೆಚ್ಚುಗೆಗೆ ಪಾತ್ರರಾದರು. ಈ ಸಭೆಯು ರಾಜಶಾಹಿಯ ರಾಜಕೀಯ ತುರ್ತಿನಿಂದಾಗಿ ಮತ್ತು ಆಗಿನ ಚಾರಿತ್ರಿಕ ಪರಿಸ್ಥಿತಿಯ ಅನಿವಾರ್ಯತೆಯಿಂದ ರೂಪ ತಳೆಯಿತು.[೧೦]

ರಂಗಾಚಾರ್ಲುರವರ ಉದ್ದೇಶವಿದ್ದದ್ದು ಈ ಸಭೆಯನ್ನು ಇಂಗ್ಲೆಂಡಿನ ಪಾರ್ಲಿಮೆಂಟ್‌ನ ಹಾಗೆ ಮಾಡಬೇಕೆಂದು ಹಾಗೂ ಪ್ರಜೆಗಳನ್ನು ಜವಾಬ್ದಾರಿ ನಾಯಕರನ್ನಾಗಿಸುವುದು.ಇದು ಅವರ ಭವಿಷ್ಯ ಕಲ್ಪನೆಯಾಗಿತ್ತೆಂದು ಎಂ.ವೆಂಕಟಕೃಷ್ಣಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ.

## ೩.೩ ಸಾಧನೆ

ಪ್ರಜಾಪ್ರತಿನಿಧಿ ಸಭೆ ಸಲಹೆಗಾರರ ಕೂಟವಾಗಿ, ಯಾವುದೇ ಜವಾಬ್ದಾರಿಯುತ ಅಧಿಕಾರವಿಲ್ಲದೇ ಪ್ರಜೆಗಳನ್ನು ಮತ್ತು ಬ್ರಿಟಿಷರನ್ನು ಸಮಾಧಾನಪಡಿಸುವ ಉದ್ದೇಶದಿಂದ ಹಾಗೂ ಮೈಸೂರು ಸಂಸ್ಥಾನ ಮತ್ತೆ ಸಾಮ್ರಾಜ್ಯಶಾಹಿಗಳ ಪಾಲಾಗದಂತೆ ತಡೆಯಲು ಸ್ಥಾಪಿಸಿದರೂ ಸಹ ಪ್ರಜೆಗಳು ಎಚ್ಚೆತ್ತುಕೊಂಡು ಸಂಸ್ಥಾನದ ಆಡಳಿತವನ್ನು ಟೀಕಿಸತೊಡಗಿದರು. ಹಾಗೂ ಈ ಸಭೆಗೆ ತಾನಾಗಿಯೇ ಸಭೆ ಸೇರುವ ಅಧಿಕಾರವಿರಲಿಲ್ಲ. ಸಭೆ ಕರೆಯುವುದು ಸರ್ಕಾರ, ಸಭೆ ಮುಗಿಯಿತು ಎಂದು ಹೇಳುವುದು ಸರ್ಕಾರವೇ[೧೧] ಇಂತಹ ಪರಿಸ್ಥಿತಿಯಲ್ಲಿಯೂ ಪ್ರಜೆಗಳು ತಮಗೆ ಬೇಕಾದ ಹಕ್ಕುಗಳಿಗೆ ದಿವಾನರ ಸಂಗಡ ವಾಗ್ವಾಳಿ ನಡೆಸುತ್ತಿದ್ದರು.

ಸರ್ಕಾರಿ ಆಜ್ಞೆಗಳ ಮೂಲಕ ೧೮೮೭ ಮತ್ತು ೧೮೯೧ರಲ್ಲಿ ಪುರಸಭೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಪ್ರತಿನಿಧಿಗಳನ್ನು ನಾಮಕರಣ ಮಾಡಿಕಳುಹಿಸಲು ಅಧಿಕಾರ ಕೊಟ್ಟವು.[೧೨] ಜಿಲ್ಲಾಧಿಕಾರಿಗಳು ನಾಮಕರಣ ಮಾಡುತ್ತಿದ್ದನ್ನು ತಪ್ಪಿಸಿ, ಸರ್ಕಾರಕ್ಕೆ ನಿರ್ಧಿಷ್ಟ ಭೂಕಂದಾಯ

ಕೊಡುತ್ತಿದ್ದ ಶ್ರೀಮಂತರು, ಪ್ರತಿನಿಧಿಗಳನ್ನು ಚುನಾಯಿಸಲು ೧೮೮೭ರಲ್ಲಿ ಅವಕಾಶ ಮಾಡಿಕೊಡಲಾಯಿತು. ಆದರೆ ಮತದಾರರ ಸಂಖ್ಯೆ ಕಡಿಮೆ ಇದ್ದುದರಿಂದ ಅವಿರೋಧವಾಗಿಯೇ ಸದಸ್ಯರು ಆಯ್ಕೆಯಾಗುತ್ತಿದ್ದರು. ಸಭಾಕಲಾಪದ ರೀತಿಯಲ್ಲಿ ಬದಲಾವಣೆ ಮಾಡಿ ಪ್ರತಿಜಿಲ್ಲೆಯ ಸದಸ್ಯರು ಸಭೆಯ ಅಧಿವೇಶನಕ್ಕೆ ಮುನ್ನ ಕಲೆತು, ಮನವಿಯನ್ನರ್ಪಿಸಬೇಕಾದ ವಿಷಯಗಳ ಬಗೆಗೆ ಒಮ್ಮತಕ್ಕೆ ಬರಲು ಸಹಕಾರವಾಗುವಂತೆ ಆಜ್ಞೆ ಹೊರಡಿಸಿದರು.[೧೩] ಈ ಬದಲಾವಣೆ ಸದಸ್ಯರಲ್ಲಿ ಐಕ್ಯತೆ ಬೆಳೆಸಿ ಸಮಾನ ಶ್ರದ್ಧೆಯಿಂದ ಬೇಡಿಕೆಗಳ ಬಗ್ಗೆ ಸರ್ಕಾರದೊಡನೆ ವ್ಯವಹರಿಸಲು ಅನುಕೂಲ ಮಾಡಿತು.

ಪ್ರಜಾಪ್ರತಿನಿಧಿ ಸಭೆಯ ಕಾರ್ಯಕಲಾಪಗಳನ್ನು ಪರಿಶೀಲಿಸಿದಾಗ ಪ್ರಭುತ್ವದ ರೀತಿ-ನೀತಿಗಳ ಮೇಲೆ ಸದಸ್ಯರು ಸಾಕಷ್ಟು ಪ್ರಭಾವ ಬೀರಿರುವುದು ಗಮನಕ್ಕೆ ಬರುತ್ತದೆ. ತಮ್ಮ ಸ್ಥಾನ-ಗೌರವಕ್ಕೆ ತಕ್ಕಂತೆ ಅಧಿಕಾರ ಮತ್ತು ಶಾಸನ ಮರ್ಯಾದೆಯನ್ನು ಸಲ್ಲಿಸಬೇಕೆಂದು ಅವರು ಹೊಡೆದಾಡಿದರು. ಅವಶ್ಯಕವೆನಿಸಿದಾಗ ಪ್ರತಿನಿಧಿಗಳು ಸರ್ಕಾರದ ರೀತಿ-ನೀತಿಗಳನ್ನು ಕುರಿತು ತೀಕ್ಷ್ಣವಾಗಿ ಟೀಕೆ ಮಾಡಿದರು.[೧೪]

೧೮೯೧ರ ಅಧಿವೇಶನದಲ್ಲಿ ಪ್ರಜಾಪ್ರತಿನಿಧಿಗಳು ಬಾಲ್ಯ ವಿವಾಹ ಪದ್ಧತಿಯನ್ನು ನಿಲ್ಲಿಸಬೇಕೆಂದು ಅದಕ್ಕೆ ಸೂಕ್ತ ಶಾಸನ ಮಾಡಬೇಕೆಂದು ಅರಿಕೆ ಮಾಡಿದರು. ಮುಂದಿನ ಸಭೆಗಳಲ್ಲಿ ಬಾಲ್ಯ ವಿವಾಹ ಪದ್ಧತಿಯನ್ನು ಸರ್ಕಾರ ರದ್ದುಗೊಳಿಸಿತು.[೧೫] ಹಾಗೂ ಸಂಸ್ಥಾನದ ಬೊಕ್ಕಸಕ್ಕೆ ರೂ ೧೦೦ಕ್ಕೂ ಮೇಲ್ಪಟ್ಟು ಭೂಕಂದಾಯ ಸಲ್ಲಿಸುವ ಮತ್ತು ವಿಶ್ವವಿದ್ಯಾಲಯಗಳ ಪದವಿಯಿದ್ದು ರಾಜ್ಯದಲ್ಲಿ ವಾಸಿಸುತ್ತಿದ್ದವರಿಗೆ ಮಾತ್ರ ಚುನಾವಣೆಗಳಲ್ಲಿ ಪಾಲ್ಗೊಳ್ಳುವ ಅವಕಾಶ ನೀಡಲಾಯಿತು. ಪರಿಣಾಮವಾಗಿ ರಾಜ್ಯದ ೬೬ ತಾಲ್ಲೂಕುಗಳಲ್ಲಿ ಪ್ರತಿ ತಾಲ್ಲೂಕಿಗೆ ೪೦ ಜನರು ಅರ್ಹರಾದರು.[೧೬]

ಸಭೆಯ ಕಲಾಪಗಳಲ್ಲಿ ಮದ್ರಾಸ್-ಮೈಸೂರು ಚಳವಳಿ ಬಿಸಿಯೇರುತ್ತಿದ್ದು, ಸದಸ್ಯರು ಅವಗಾಹನೆಗೆ ತರುವುದನ್ನು ಬಿಟ್ಟು ಒತ್ತಾಯಿಸಲು ಪ್ರಾರಂಭಿಸಿದರು.[೧೭] ೧೮೯೪ರಲ್ಲಿ ಸದಸ್ಯತ್ವದ ಅವಧಿಯನ್ನು ಮೂರು ವರ್ಷಕ್ಕೆ ಹೆಚ್ಚಿಸಿ ಚುನಾವಣೆಯಲ್ಲಿ ಪಾಲ್ಗೊಳ್ಳಲು ಬೇಕಾಗಿದ್ದ ಅರ್ಹತೆಯಲ್ಲಿ ಶೇ ೫೦ರಷ್ಟನ್ನು ಕಡಿಮೆ ಮಾಡಿದರು. ಹಾಗೂ ೧೯೧೭ರಿಂದ ಒಂದು ಬಾರಿ ಸಮಾವೇಶಗೊಳ್ಳುತ್ತಿದ್ದ ಸಭೆ ಎರಡು ಬಾರಿ ಸಮಾವೇಶಗೊಳ್ಳಲು ಅವಕಾಶ ನೀಡಲಾಯಿತು.[೧೮] ನಂತರ ೧೯೨೦ರ ನಂತರ ಬ್ರಾಹ್ಮಣೇತರರ ವಾಗ್ವಾದ ಹಾಗೂ ಕಾಂಗ್ರೆಸ್ ರೂಪ ತಳೆದದ್ದರಿಂದ ಸಭೆಯಲ್ಲಿ ಬಿರುಸಿನ ಚಟುವಟಿಕೆಗಳು ನಡೆದು ಬ್ರಾಹ್ಮಣೇತರರು ತಮ್ಮ ಹಕ್ಕು ಬಾಧ್ಯತೆಗಳಿಗೆ ಹೋರಾಡಿದರೆ, ಕಾಂಗ್ರೆಸ್ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಅಂಶವನ್ನು ಮುಂದಿಟ್ಟಿತು. ಹಲವಾರು ಆಸಕ್ತಿಗಳನ್ನುಳ್ಳ ಅನೇಕ ಗುಂಪುಗಳು ಜೊತೆ ಸೇರಿ ತಮ್ಮ ಹಕ್ಕುಗಳನ್ನು ಕೇಳತೊಡಗಿದರು.

ಈ ಮಧ್ಯೆ ೧೯೨೩ರಲ್ಲಿ ಸಂವಿಧಾನ ಸುಧಾರಣೆಗಳನ್ನು ಸರ್ಕಾರ ಘೋಷಿಸಿತು. ಈ ಸುಧಾರಣೆಗಳು ತಂದ ಬದಲಾವಣೆಗಳಲ್ಲಿ ಮತದಾರರಿಗೆ ಇರಬೇಕಾಗಿದ್ದ ಅರ್ಹತೆಯನ್ನು ಶೇ ೪೦ರಷ್ಟು ಕಡಿಮೆಗೊಳಿಸಿ ನಾಲ್ಕು ಜನ ಪ್ರತಿನಿಧಿ ಸಭೆಯ ಸದಸ್ಯರಿಗೆ ನ್ಯಾಯವಿಧಾಯಕ ಸಭೆಯಲ್ಲಿ ಸ್ಥಾನ ಮತ್ತು ಶಾಸನಗಳ ಮೇಲೆ ಚರ್ಚೆಗೆ ಅವಕಾಶ ಹಾಗೂ ಮಹಿಳೆಯರಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ಹಕ್ಕುಗಳನ್ನು ಕೊಟ್ಟಿತು.[೧೯] ೧೯೩೭ರಲ್ಲಿ ಭಾರತ ಸರ್ಕಾರದ ಕಾಯಿದೆ ಅನುಷ್ಠಾನಕ್ಕೆ ಬಂದು ಬ್ರಿಟಿಷ್ ಪ್ರಾಂತ್ಯಗಳಲ್ಲಿ ಜವಾಬ್ದಾರಿ ಸರ್ಕಾರಗಳು ರಚಿತಗೊಂಡರೆ ಮೈಸೂರಿನ ಕಾಂಗ್ರೆಸ್ ನಾಯಕರು ಪ್ರಜೆಗಳಿಗೆ ಹೆಚ್ಚಿನ ಅಧಿಕಾರ ಕೊಡಬೇಕೆಂದು ಸರ್ಕಾರವನ್ನು ಒತ್ತಾಯಿಸಲಾರಂಭಿಸಿದರು. ಇದರಿಂದ ೧೯೩೮ರಲ್ಲಿ ಶ್ರೀನಿವಾಸ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ ಸಂವಿಧಾನ ಸುಧಾರಣಾ ಸಮಿತಿಯನ್ನು ನೇಮಿಸಿತು.[೨೦] ಇದರ ವರದಿಯೆಂದರೆ ಇಬ್ಬರು ಪ್ರತಿನಿಧಿಗಳಿಗೆ ಮಂತ್ರಿ ಪದವಿ ಹಾಗೂ ಸಂಘಸಂಸ್ಥೆಗಳಿಗಿದ್ದ ಸದಸ್ಯತ್ವ ಪದ್ಧತಿ ಮತ್ತು ಮತದಾರರ ಅರ್ಹತೆಯನ್ನು ಕಡಿಮೆಗೊಳಿಸಿತು. ೧೯೪೦ರ ಆರಂಭದಲ್ಲಿ ಕೇವಲ ಮೈಸೂರಿನಲ್ಲಿ ಮಾತ್ರವೇ ಶಾಸನಸಭೆಯ ಅಧಿವೇಶನ ನಡೆಸುವ ಬದಲು ಬೆಂಗಳೂರಿನಲ್ಲಿಯೂ ಇದನ್ನು ನಡೆಸುವ ಬೇಡಿಕೆಯನ್ನು ಮುಂದಿಟ್ಟರು. ಆದರೆ ೧೯೪೨ರಲ್ಲಿ ಅಸೆಂಬ್ಲಿಯು ಮೂರು ಅಧಿವೇಶನ ನಡೆಸುವ ಬಗ್ಗೆ ಹಾಗೂ ಅವುಗಳಲ್ಲಿ ಒಂದನ್ನು ಬೆಂಗಳೂರಿಗೆ ವರ್ಗಾಯಿಸಲು ಅನುವು ದೊರಕಿತು. ಈ ಸಮಯದಲ್ಲಿಯೇ ಸದಸ್ಯರು ಸಭಾತ್ಯಾಗ ಮಾಡುವುದು ರೂಢಿಗೆ ಬಂದಿತು.

ಮೊದಲು ಪ್ರಜಾಪ್ರತಿನಿಧಿ ಸಭೆಯ ಸದಸ್ಯರನ್ನು ಕಾರ್ಯಾಂಗವೇ ಆಯ್ಕೆ ಮಾಡುತ್ತಿತ್ತು.[೨೧] ಈ ಆಯ್ಕೆಗೆ ಸರ್ಕಾರ ಯಾವುದೇ ಸೂತ್ರವನ್ನು ರೂಪಿಸಿರಲಿಲ್ಲ. ಕ್ರಮೇಣ ಈ ಆಯ್ಕೆಗಳಲ್ಲಿ ಅಮಲ್ದಾರರ ಸಂಬಂಧ ಕಲ್ಪಿಸಲಾಯಿತು. ಹೀಗೆಯೇ ೧೮೯೧ರ ತನಕ ಬೆಳವಣಿಗೆಗಳಾಗಿ ಆಗ ಸರ್ಕಾರವು ಮೊಟ್ಟ ಮೊದಲಿಗೆ ಚುನಾವಣೆಯ ತತ್ವವನ್ನು ಆರಂಭಿಸಿತು. ಹಾಗೂ ೧೮೯೦ರಲ್ಲಿ ಪ್ರಜೆ ಎಂದರೇನು? ಪ್ರಜಾಪ್ರಭುತ್ವವೆಂದರೇನು? ಜವಾಬ್ದಾರಿ ಸರ್ಕಾರವೆಂದರೇನು? ಎಂಬುದರ ಅರ್ಥವೂ ತಿಳಿಯದವರು ಆ ಕಾಲಕ್ಕೆ ಪ್ರಜಾಪ್ರತಿನಿಧಿಗಳು ಕೇವಲ ೯ ವರ್ಷದ ಅನುಭವದಲ್ಲಿ ತಮ್ಮ ಆಯ್ಕೆಯವರೊಬ್ಬರು ಮಂತ್ರಿಮಂಡಲದಲ್ಲಿ ಇರಬೇಕೆಂದು ಆಲೋಚಿಸಿದ್ದು, ಕತ್ತಲೆಯಿಂದ ಬೆಳಕಿನೆಡೆಗೆ ಹೋಗುವ ಸೂಚಕದ ಸಂಕೇತವಾಗಿದೆ. ಸಮಸ್ಯೆಯ ಇತ್ಯರ್ಥಕ್ಕೆ ಪ್ರಜಾಪ್ರತಿನಿಧಿ ಸಭೆಯು ಸೂಕ್ತವಾದ ವೇದಿಕೆಯೆಂಬುದನ್ನು ಜನರು ಬಹುಬೇಗ ತಿಳಿದುಕೊಂಡರು.

## ೩.೪ ಮಿತಿಗಳು

ಪ್ರಜಾಪ್ರತಿನಿಧಿ ಸಭೆಯಲ್ಲಿ ಸಾರ್ವಜನಿಕ ಕ್ಷೇತ್ರದಿಂದ ಚುನಾಯಿತರಾದ ನಿಜವಾದ ಪ್ರತಿನಿಧಿಗಳ ಸಂಖ್ಯೆಗಿಂತ ಕೆಲವು ವಿಶೇಷ ಕ್ಷೇತ್ರಗಳು ಹಾಗೂ ಸರ್ಕಾರದಿಂದ ನೇಮಿತರಾದವರ

ಸಂಖ್ಯಾಬಲ ಅಧಿಕವಾಗಿತ್ತು. ಪಟೇಲ ಶಾನುಭೋಗರಿಗೆ ಸ್ಥಾನಗಳನ್ನು ಕೊಟ್ಟು ಸಂತೃಪ್ತಿಗೊಳಿಸಲಾಗಿತ್ತು. ಇವರು ಸರ್ಕಾರದ ವಿರುದ್ಧ ಮಾತಾಡಿದರೆ ತಮ್ಮ ಅಧಿಕಾರವನ್ನು ಕಳೆದುಕೊಳ್ಳುತ್ತಿದ್ದರು.[೨೨] ಈ ಭಯ ಅವರನ್ನು ಹತೋಟಿಯಲ್ಲಿಟ್ಟಿತು. ಮತಾಧಿಕಾರವನ್ನು ಸೀಮಿತ ಗೊಳಿಸಿದ್ದರು. ಉಭಯ ಸದನಗಳಿಗೆ ತಮ್ಮ ಅಧ್ಯಕ್ಷರನ್ನು ಚುನಾಯಿಸುವ ಅಧಿಕಾರವಿರಲಿಲ್ಲ. ದಿವಾನರು ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರಾಗಿದ್ದರು.[೨೩] ಸ್ಥಳೀಯ ಆಡಳಿತವನ್ನು ಸರ್ಕಾರ ತನ್ನ ಅಧೀನವಾಗಿಟ್ಟು ಅದನ್ನು ಮೊಟಕು ಮಾಡುತ್ತಿತ್ತು. ಪ್ರಜಾಪ್ರತಿನಿಧಿ ಎಂದರೆ ಪ್ರಜೆಗಳಿಂದ ಚುನಾಯಿಸಲ್ಪಡುವ ವ್ಯಕ್ತಿ ಆಗುತ್ತಾನೆಯೇ ಹೊರತು ಪ್ರಭುವಿನಿಂದ ನೇಮಿತನಾದವನು ಪ್ರಜೆಗಳ ಪ್ರತಿನಿಧಿಯಾಗಲಾರ.

ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರಾದ ದಿವಾನರು ತಮಗೆ ಅಪ್ರಿಯವಾದ ನಿರ್ಣಯಗಳಿಗೆ ಅವಕಾಶಕೊಡುತ್ತಿರಲಿಲ್ಲ. ಸಾರ್ವಜನಿಕ ಹಿತದೃಷ್ಟಿಯಿಂದ ಈ ನಿರ್ಣಯಗಳ ಅಗತ್ಯವಿಲ್ಲವೆಂದು ತಿರಸ್ಕರಿಸುತ್ತಿದ್ದರು. ಈ ರೀತಿಯಲ್ಲಿ ಅನೇಕ ಬೇಡಿಕೆಗಳು, ತಿರಸ್ಕೃತಗೊಂಡವು. ಕೊನೆಗೆ ಉಭಯ ಸದನಗಳಲ್ಲಿ ಶಾಸನಸಮ್ಮತ ಮಾತನಾಡುವ ಅವಕಾಶ ತಪ್ಪಿ ಹೋದುದರಿಂದ ಪತ್ರಿಕೆಗಳ ಮೂಲಕ ಹಾಗೂ ಸಭೆಗಳನ್ನು ಏರ್ಪಡಿಸಿ ನಾಯಕರು ಪ್ರಜೆಗಳನ್ನು ಹುರಿದುಂಬಿಸುತ್ತಿದ್ದರು. ಆದರೆ ದಿವಾನರು ಪತ್ರಿಕಾ ಶಾಸನ ಬಳಸಿ ಪತ್ರಿಕೆಗಳು ಪ್ರಕಟವಾಗದಂತೆ ಮಾಡುತ್ತಿದ್ದರು.[೨೪] ೧೯೧೭ರ ಹೊತ್ತಿಗೆ ಸದಸ್ಯರು ಸದನದಲ್ಲಿ ಪ್ರಶ್ನೆಗಳನ್ನು ಕೇಳುವ ಅವಕಾಶ ದೊರಕಿತು. ಪ್ರತಿಯೊಂದು ಅಧಿವೇಶನದಲ್ಲೂ ೧೦೦ ಪ್ರಶ್ನೆಗಳನ್ನು ಲಿಖಿತ ರೂಪದಲ್ಲಿ ಕೇಳಬಹುದಿತ್ತು, ಹಾಗೂ ಮೂಲ ಪ್ರಶ್ನೆ ಕೇಳಿದಾತನಿಗೆ ಉಪಪ್ರಶ್ನೆ ನೀಡಲ್ಪಟ್ಟಿತು. ಪ್ರಶ್ನೆಯು ವಾದ ಮತ್ತು ಸಂವಾದದ ರೂಪದಲ್ಲಿರಲಿಲ್ಲ. ಕೇವಲ ಮಾಹಿತಿ ಪಡೆಯುವ ಪ್ರಶ್ನೆಗೆ ಮಾತ್ರ ಅವಕಾಶವಿತ್ತು. ಯಾವುದೇ ಪ್ರಶ್ನೆಯನ್ನು ತಡೆಯುವ ಅವಕಾಶ ಅಧ್ಯಕ್ಷತೆ ವಹಿಸುತ್ತಿದ್ದ ದಿವಾನರಿಗಿತ್ತು.

೧೮೯೧ರ ಸಭಾಕಲಾಪದಲ್ಲಿ ಸದಸ್ಯರೊಬ್ಬರು ದಿವಾನರನ್ನು ಪ್ರತಿನಿಧಿಗಳು ಮುಂದಿನ ಚುನಾವಣೆಗಳಾಗುವವರೆಗಾದರೂ ಖಾಯಂ ಸದಸ್ಯರೆಂದು ಪರಿಶೀಲಿಸಿ, ಚುನಾವಣೆಯನ್ನು ವಾರ್ಷಿಕವಾಗಿಡದೆ ತ್ರೈವಾರ್ಷಿಕವೆಂದು ಆಜ್ಞೆ ಹೊರಡಿಸಬೇಕೆಂದು ಬೇಡಿಕೆ ಸಲ್ಲಿಸಿದರು. ಆಗ ದಿವಾನರು "ಸಭೆಯ ಉದ್ದೇಶ ಮನವಿ ಸಲ್ಲಿಸುವದಕ್ಕೆ ಮಾತ್ರ ಆಡಳಿತ ಮೇಲೆ ಹಕ್ಕು ಚಲಾಯಿಸುವುದಕ್ಕಲ್ಲ" ಎಂದು ಹೇಳಿದರು. ಇದರಿಂದ ಪ್ರಜಾಪ್ರತಿನಿಧಿ ಸಭೆಯ ಮಿತಿ ಎಷ್ಟಿತ್ತೆಂದು ತಿಳಿಯುತ್ತದೆ.[೨೫]

ಮುಂಬಯಿ ಪ್ರಾಂತ್ಯದ ಗವರ್ನರೊಬ್ಬರು ಈ ಸಭೆಯನ್ನು ಕುರಿತು "ಪ್ರಜಾಪ್ರತಿನಿಧಿ ಸಭೆ ಯಾವುದೇ ಶಾಸನಾಧಿಕಾರವಿಲ್ಲದ್ದು"[೨೬] ಎಂದು ಹೇಳಿದ್ದಾರೆ. ಈ ಸಭೆಯನ್ನು ಕರೆಯುವುದು ಹಾಗೂ ಸಭೆಯು ಮುಕ್ತಾಯವಾಯಿತು ಎಂದು ಹೇಳುವುದು ಸರ್ಕಾರದ

ಕೆಲಸವಾಗಿತ್ತು. ಈ ಸಭೆಗೆ ಅಂಗೀಕೃತ ವಿಷಯಗಳ ಕುರಿತು ಕರ್ತವ್ಯಗಳನ್ನು ವಹಿಸಿಕೊಡುವ ಉದ್ದೇಶ ಸರ್ಕಾರಕ್ಕೆ ಇರಲಿಲ್ಲ. ಏಕೆಂದರೆ ಮಹಾರಾಜರು ಬ್ರಿಟಿಷ್ ಪ್ರಭುತ್ವದೊಂದಿಗೆ ಮಾಡಿಕೊಂಡಿದ್ದ ಕರಾರು ಅವರ ಅಧಿಕಾರಕ್ಕೆ ಒಂದು ಮಿತಿಯನ್ನೊಡ್ಡಿತ್ತು ಎಂದು ಹೇಳಬಹುದು.

ಆರಂಭದ ದಿನಗಳಲ್ಲಿ ಪ್ರಜಾಪ್ರತಿನಿಧಿ ಸಭೆ ಕೇವಲ ಜನರ ಆಹೋತ್ತರಗಳನ್ನು, ದಿವಾನರ ಮತ್ತು ಹಿರಿಯ ಅಧಿಕಾರಿಗಳ ಸಮ್ಮುಖದಲ್ಲಿ ಅರಿಕೆ ಮಾಡುವ ವೇದಿಕೆಯಾಗಿತ್ತು. ಆದರೆ ಬರುಬರುತ್ತಾ ಸರ್ಕಾರದ ಲೋಪದೋಷಗಳನ್ನು ಸಾಮಾಜಿಕ ಆರ್ಥಿಕ ಬವಣೆಗಳನ್ನು ಬಿಗುಮಾನದಿಂದ ವಿಶದೀಕರಿಸುವ ಸದನವಾಗಿ ಸಫಲವಾಯಿತು. ಏನೇ ಮಿತಿಗಳಿದ್ದರೂ ಪ್ರಜಾಪ್ರತಿನಿಧಿ ಸಭೆ ಸಂಸ್ಥಾನದ ಅನೇಕ ಸದಸ್ಯರನ್ನು ನಿರಂಕುಶ ಆಡಳಿತಕ್ಕೆ ವಿರೋಧವಾಗಿ ಹೋರಾಡಲು ಅಣಿಗೊಳಿಸಿತು. ಸರ್ಕಾರದ ಆಡಳಿತದಲ್ಲಿ ದೋಷ ಕಂಡು ಬಂದಾಗ, ಸದಸ್ಯರು ಸರ್ಕಾರದ ವಿರುದ್ಧ ಹೋರಾಡಲು ಈ ಸಭೆ ವೇದಿಕೆಯಾಗಿತ್ತು. ನಿರಂಕುಶ ಆಡಳಿತವನ್ನು ನಾಶಗೊಳಿಸಲು ಜನತೆಯಲ್ಲಿ ಜಾಗೃತಿ ಮೂಡಿಸಿ, ಜನಾಭಿಪ್ರಾಯ ರೂಪಿಸುವಲ್ಲಿ ಯಶಸ್ವಿಯಾಯಿತು. ಈ ಸಭೆಯು ಮೈಸೂರು ಸಂಸ್ಥಾನದಲ್ಲಿ ಸ್ಥಳೀಯ ಸರ್ಕಾರ, ಜವಾಬ್ದಾರಿ ಸರ್ಕಾರ ಕೊನೆಗೆ ಪೂರ್ಣ ಸ್ವಾತಂತ್ರ್ಯ ಪಡೆಯುವಲ್ಲಿಯೂ ಸಹ ಮೊದಲ ವೇದಿಕೆಯಾಗಿ ಮಾರ್ಪಟ್ಟಿತು. ಕಾಂಗ್ರೆಸ್ ನಾಯಕರು ಹಾಗೂ ಬ್ರಿಟಿಷ್ ಪ್ರಾಂತ್ಯಗಳ ಸಾರ್ವಜನಿಕರು ಪ್ರತಿನಿಧಿ ಸಭೆಯನ್ನು "ಪೂರ್ವ ದೇಶಗಳ ಜನತಾಂತ್ರಿಕ ಕಲ್ಪನೆ"ಯೆಂದು[೨೭] ಕರೆದರು. ಅದು ಕೊನೆಗೆ ಜನತೆಯಲ್ಲಿ ಜಾಗೃತಿ ಮೂಡಿಸಿ ರಾಜಪ್ರಭುತ್ವವನ್ನು ಕೊನೆಗಾಣಿಸುವಲ್ಲಿ ಪ್ರಯೋಜನವಾಯಿತು. ಅಂದಿನ ಪ್ರಜಾಪ್ರತಿನಿಧಿ ಸಭೆಯೇ ಇಂದಿನ ವಿಧಾನ ಸಭೆ ಎಂದರೆ ತಪ್ಪಾಗಲಾರದು.

**ಕೊನೆಟಿಪ್ಪಣಿಗಳು**

೧. **ವಿಧಾನ ಮಂಡಲ ಇತಿಹಾಸ,** (ಮೈಸೂರು ಪ್ರಜಾಪ್ರತಿನಿಧಿ ಸಭೆ) ಸಂಪುಟ – ೧, (೧೮೮೧–೧೯೦೭) ಮೈಸೂರು, ಪು. ೨೦

೨. ಅದೇ, ಪು. ೨೧

೩. ಅದೇ, ಪು. ೨೩–೨೫

೪. ಚಂದ್ರಶೇಖರ್ ಎಸ್., **ವಸಾಹತು ಕಾಲೀನ ಕರ್ನಾಟಕ,** ಬೆಂಗಳೂರು, ೨೦೦೬. ಪು. ೭೩

೫. ರಾಮಯ್ಯ ಪಿ.ಆರ್., ದಯಾಸಾಗರ ಎಂ. ವೆಂಕಟಕೃಷ್ಣಯ್ಯ., **ಜೀವನ ಮತ್ತು ಸಾಧನೆ,** ಪು. ३४

೬. **ಕರ್ನಾಟಕ ಪರಂಪರೆ,** ಸಂ. ೨ (ಮಧ್ಯಕಾಲ ಮತ್ತು ಆಧುನಿಕ ಕಾಲ) ಬೆಂಗಳೂರು, ೨೦೦೬, ಪು. ೩೪೫

೭. ರಾಮಯ್ಯ ಪಿ.ಆರ್., ಮೇಲಿನದೇ ಪು. ೩೫

೮. **ಪ್ರೊಸೀಡಿಂಗ್ಸ್ ಆಫ್ ದಿ ಮೈಸೂರು ರೆಪ್ರೆಸೆಂಟೆಟಿವ್ ಅಸೆಂಬ್ಲಿ,** (ಪಿ.ಎಂ.ಆರ್.ಎ.) ಅಕ್ಟೋಬರ್ ೧೮೮೧, ಬೆಂಗಳೂರು, ಪು. ೧

೯. **ವಿಧಾನ ಮಂಡಲ ಇತಿಹಾಸ,** ಮೇಲಿನದೇ, ಪು. ೬೯–೭೦

೧೦. ಚಂದ್ರಶೇಖರ್ ಎಸ್., ಮೇಲಿನದೇ, ಪು. ೭೨

೧೧. ಕೃಷ್ಣರಾವ್ ಎಂ.ವಿ., **ಕರ್ನಾಟಕ ಇತಿಹಾಸ ದರ್ಶನ,** ಬೆಂಗಳೂರು, ೧೯೭೦, ಪು. ೬೫೧

೧೨. ಶಾಮರಾವ್ ಎಂ., **ಟೆನ್ ಈಯರ್ ಆಫ್ ನೇಟೀವ್ ರೂಲ್ ಇನ್ ಮೈಸೂರು,** ಬೆಂಗಳೂರು, ೧೮೯೧, ಪು. ೧೦೯ – ೧೧೦

೧೩. ನಾರಾಯಣರಾವ್ ವಿ.ಎನ್., **ಕೆ.ಟಿ. ಭಾಷ್ಯಂ ಅಯ್ಯಂಗಾರ್., (ಜೀವನ ಚರಿತ್ರೆ)** ಬೆಂಗಳೂರು, ೧೯೯೧, ಪು. ೪೮

೧೪. **ಪಿ.ಎಂ.ಆರ್.ಎ.**

೧೫. **ಮೈಸೂರು ಪ್ರಜಾಪ್ರತಿನಿಧಿ ಸಭೆಯ ನಡವಳಿಕೆಗಳು,** (೧೮೯೧ನೇ ಅಕ್ಟೋಬರ್,) ಪು. ೨೫

೧೬. ಚಂದ್ರಶೇಖರ್ ಎಸ್., ಮೇಲಿನದೇ, ಪು. ೭೪

೧೭. ಹೆಟ್ನೆ ಬಿ., **ದಿ ಪೊಲಿಟಿಕಲ್ ಎಕಾನಮಿ ಆಫ್ ಇನ್‌ಡೈರೆಕ್ಟ್ ರೂಲ್ ಮೈಸೂರು,** ೧೮೮೧ – ೧೯೪೭, ಪು. ೧೦೮

೧೮. **ಪಿ.ಎಂ.ಆರ್.ಎ.**, ಅಕ್ಟೋಬರ್ ೧೯೧೭, ಪು. ೩೫

೧೯. **ಡಾಕ್ಯುಮೆಂಟ್ ಆನ್ ದಿ ಮೈಸೂರು ರೆಪ್ರೆಸೆಂಟೆಟಿವ್ ಅಸೆಂಬ್ಲಿ**, ಭಾಗ. ೨, ೧೯೨೦ – ೧೯೪೭, ಬೆಂಗಳೂರು, ೧೯೮೭, ಪು. ೨೭ – ೩೨

೨೦. **ವಿಧಾನ ಮಂಡಲ ಇತಿಹಾಸ**, ಪು. ೨೪

೨೧. **ಪಿ.ಎಂ.ಆರ್.ಎ.**

೨೨. ನಾರಾಯಣರಾವ್ ವಿ.ಎಸ್., ಮೇಲಿನದೇ, ಪು. ೭೩–೭೪

೨೩. ಅನಂತರಾಮರಾವ್., (ಸಂ) **ಸುವರ್ಣ ಕರ್ನಾಟಕ ದರ್ಶನ**, ೨೦೦೬, ಪು. ೯೭

೨೪. ನಾರಾಯಣರಾವ್ ವಿ.ಎಸ್., ಮೇಲಿನದೇ, ಪು. ೧೪೪–೧೪೫

೨೫. **ಪಿ.ಎಂ.ಆರ್.ಎ.**, ಅಕ್ಟೋಬರ್, ಪು. ೩೩

೨೬. ಚಂದ್ರಶೇಖರ್ ಎಸ್., ಮೇಲಿನದೇ, ಪು. ೭೫

೨೭. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು**, ೨೦೦೨, ಪು. ೫೮

* * *

ಅಧ್ಯಾಯ – ೪

# ಮೈಸೂರು ಚಲೋ ಚಳವಳಿ

೪.೧ ಮೈಸೂರು ಕಾಂಗ್ರೆಸ್

೪.೨ ಚಳವಳಿಯ ಆರಂಭ

೪.೩ ಚಳವಳಿಯ ಹರಡುವಿಕೆ

೪.೪ ಪರಿಣಾಮಗಳು

ಅಧ್ಯಾಯ ೪

# ಮೈಸೂರು ಚಲೋ ಚಳವಳಿ

ಸ್ವಾತಂತ್ರ್ಯಪೂರ್ವ ಭಾರತ ಬ್ರಿಟಿಷರ ಸಾಮ್ರಾಜ್ಯಶಾಹಿ ಧೋರಣೆಗೆ ಅನುಗುಣವಾಗಿ ರಚನೆಗೊಂಡು ಅವರ ಒಡೆದು ಆಳುವ ನೀತಿಗೆ ಸಿಲುಕಿ ಸ್ವಂತಿಕೆಯನ್ನು ಕಳೆದುಕೊಂಡಿತ್ತು. ಬ್ರಿಟಿಷರ ಆಳ್ವಿಕೆಗೆ ಒಳಗಾಗಿದ್ದ ಭಾರತ ದೇಶವು ಇಬ್ಭಾಗವಾಗಿ ಪ್ರಾಂತ್ಯಗಳು ಮತ್ತು ಆಶ್ರಿತ ಸಂಸ್ಥಾನಗಳು ಎಂದು ವಿಭಾಗಿಸಲ್ಪಟ್ಟು, ಆಗ ೧೧ ಪ್ರಾಂತ್ಯಗಳು ಹಾಗೂ ೫೬೫ ಸಂಸ್ಥಾನಗಳು ಇದ್ದವು.[೧] ಬ್ರಿಟಿಷ್ ಭಾರತವನ್ನು ಆಡಳಿತ ದೃಷ್ಟಿಯಿಂದ ೨ ಭಾಗಗಳಾಗಿ ವಿಂಗಡಿಸಬಹುದು. ಒಂದು ಬ್ರಿಟಿಷರಿಂದಲೇ ನೇರವಾಗಿ ಆಡಳಿತಕ್ಕೆ ಒಳಪಟ್ಟಿದ್ದ ಬ್ರಿಟಿಷ್ ಭಾರತ, ಮತ್ತೊಂದು ಬ್ರಿಟಿಷರ ಅಧೀನಕ್ಕೆ ಒಳಪಟ್ಟಿದ್ದ ರಾಜ ಮಹಾರಾಜರ ಆಡಳಿತಕ್ಕೆ ಒಳಗಾಗಿದ್ದ ದೇಶೀಯ ಸಂಸ್ಥಾನಗಳು. ರಾಜ ಮಹಾರಾಜರ ಆಡಳಿತದ ಮೇಲೆ ಉಸ್ತುವಾರಿಯಾಗಿ ಬ್ರಿಟಿಷ್ ಸರ್ಕಾರದಿಂದ ನೇಮಕ ಮಾಡಲ್ಪಟ್ಟ ರೆಸಿಡೆಂಟರುಗಳು ಪ್ರತಿಯೊಂದು ಸಂಸ್ಥಾನದಲ್ಲಿಯೂ ಇರುತ್ತಿದ್ದರು. ಇವುಗಳಲ್ಲಿ ಮೂವತ್ತು ಸಂಸ್ಥಾನಗಳು ಮಾತ್ರ ಸಾಕಷ್ಟು ವಿಸ್ತೀರ್ಣ, ಜನಸಂಖ್ಯೆ ಹಾಗೂ ಸಂಪನ್ಮೂಲಗಳನ್ನು ಹೊಂದಿದ್ದ ರಾಜ್ಯವಾಗಿದ್ದವು. ಇವುಗಳಲ್ಲಿ ಮೈಸೂರು ಸಂಸ್ಥಾನ ಎರಡನೇ ದೊಡ್ಡ ರಾಜ್ಯವಾಗಿತ್ತು.[೨]

ಭಾರತದ ಜನತೆಯ ಸ್ವಾತಂತ್ರ್ಯದ ಹಂಬಲತೆಯ ಪರಿಣಾಮವಾಗಿ ಹಾಗೂ ನಿರಂತರ ಹೋರಾಟದ ಫಲವಾಗಿ ೧೯೪೭ ಆಗಸ್ಟ್ ೧೫ ರಂದು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತು. ಆಗ ಬ್ರಿಟಿಷರು ಘೋಷಿಸಿದ ಪ್ರಣಾಳಿಕೆಯ ಪ್ರಕಾರ ಭಾರತಕ್ಕೆ ಸ್ವಾತಂತ್ರ್ಯ ಬಂದಾಗಲೆ ಈ ದೇಶೀಯ ಸಂಸ್ಥಾನಗಳ ಮೇಲೆ ಬ್ರಿಟಿಷ್ ಪ್ರಭುತ್ವಕ್ಕಿದ್ದ ಸಾರ್ವಭೌಮ ಅಧಿಕಾರ ಮುಕ್ತಾಯಗೊಂಡಿತು. ಈ ಸಂಸ್ಥಾನಗಳ ರಾಜಕೀಯ ಏಳಿಗೆಯ ಬಗ್ಗೆ ಸೂಕ್ತ ನಿರ್ಧಾರವಿರಲಿಲ್ಲ. ದೇಶೀಯ ಸಂಸ್ಥಾನದ ಅರಸರುಗಳಿಗೆ ಒಂದು ಯೋಜನಾ ಪತ್ರವನ್ನು ಸೂಚಿಸಲಾಗಿತ್ತು. ಅದರಲ್ಲಿ ಸಂಸ್ಥಾನದ ರಾಜರುಗಳು ತಮ್ಮ ಸಂಸ್ಥಾನವನ್ನು ಭಾರತದ ಒಕ್ಕೂಟಕ್ಕಾಗಲಿ, ಪಾಕಿಸ್ತಾನಕ್ಕಾಗಲಿ, ಸೇರ್ಪಡೆ ಮಾಡಿಕೊಳ್ಳುವ ಅವಕಾಶವನ್ನು ಕೊಡಲಾಗಿತ್ತು. ಒಂದು ವೇಳೆ ಅವರು ಸ್ವತಂತ್ರವಾಗಿರಲು ಇಚ್ಛಿಸುವುದಾದರೆ ಅದಕ್ಕೂ ವಿಫಲ ಅವಕಾಶವಿತ್ತು. ಅದರಂತೆ ಹೈದರಾಬಾದ್ ಸಂಸ್ಥಾನದ

ನಿಜಾಮ ಸ್ವತಂತ್ರವಾಗಿರಲು ಬಯಸಿದನು. ಉಳಿದ ಅನೇಕ ಸಂಸ್ಥಾನಗಳು ಭಾರತದ ಒಕ್ಕೂಟಕ್ಕೆ ಸೇರಲು ನಿರ್ಧಾರ ಕೈಗೊಂಡವು. ಅದರಲ್ಲಿ ಮೈಸೂರು ಸಂಸ್ಥಾನವೂ ಒಂದು ಹಾಗೂ ಮೊದಲನೆಯದು.

ಆ ಸಮಯದಲ್ಲಿ ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ಜಯಚಾಮರಾಜ ಒಡೆಯರ್ ಅವರು ಸಂಸ್ಥಾನದ ಪ್ರಜೆಗಳ ಒತ್ತಾಯದಿಂದ ಮೈಸೂರು ಸಂಸ್ಥಾನವನ್ನು ಭಾರತದ ಒಕ್ಕೂಟಕ್ಕೆ ಸೇರ್ಪಡೆ ಮಾಡುವ ಉದ್ದೇಶದಿಂದ ಭಾರತ ಸರ್ಕಾರ ರೂಪಿಸಿದ್ದ ಸೇರ್ಪಡೆಯ ಸಂಹಿತೆಗೆ ಸಹಿ ಹಾಕಿದರು. ಆದರೆ ಈ ಒಪ್ಪಂದದ ಪ್ರಕಾರ ವಿದೇಶಾಂಗ ವ್ಯವಹಾರ, ಸಾರಿಗೆ ವ್ಯವಸ್ಥೆ ಮತ್ತು ರಕ್ಷಣೆಗೆ ಸಂಬಂಧಿಸಿದ ಮೂರು ವಿಷಯಗಳಿಗೆ ಮಾತ್ರ ಕೇಂದ್ರ ಸರ್ಕಾರದ ಆಡಳಿತ ವ್ಯಾಪ್ತಿಯನ್ನು ನಿಯಮಿಸಿತು. ಇನ್ನಿತರ ಎಲ್ಲ ಅಧಿಕಾರವನ್ನು ಮಹಾರಾಜರ ಸರ್ಕಾರವೇ ಸಾರ್ವಭೌಮ ಅಧಿಕಾರವಾಗಿ ಉಳಿಸಿಕೊಂಡಿತು. ದಿವಾನರಾದ ಆರ್ಕಟ್ ರಾಮಸ್ವಾಮಿ ಮೊದಲಿಯಾರ್ ಮತ್ತು ಮಹಾರಾಜರ ಆಪ್ತ ವರ್ಗದ ಅಧಿಕಾರಿಗಳು ಮಹಾರಾಜರ ಸಾರ್ವಭೌಮ ಅಧಿಕಾರದ ರಕ್ಷಣೆಗೆ ಬೆಂಗಾವಲಾದರು.

ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆ ಇದ್ದರೂ ಸಹ ಅದು ಪ್ರಜೆಗಳಿಗೆ ಅಪ್ರಯೋಜಕವಾಗಿತ್ತು ಹಾಗೂ ಕೇವಲ ಅಹವಾಲುಗಳನ್ನು ಹೇಳಿಕೊಳ್ಳುವ ವೇದಿಕೆಯಾಗಿತ್ತು. ಪ್ರಜಾಹಿತ ವ್ಯವಸ್ಥೆ ಇರಲಿಲ್ಲವೆಂದು ಹೇಳಬಹುದಾಗಿದೆ. ಹಾಗೂ ದೇಶೀಯ ಸಂಸ್ಥಾನಗಳ ಪ್ರಜೆಗಳ ಸ್ಥಿತಿಯು ಕರುಣಾಜನಕವಾಗಿತ್ತು. ಈ ಪ್ರಜೆಗಳು ಹೊಣೆಗಾರಿಕೆಯ ಭೀತಿಯೆ ಇರದ ಸ್ವಕೀಯರ ದರ್ಪಕ್ಕೆ ಈಡಾಗಿದ್ದು, ನಿರಂಕುಶ ಆಡಳಿತ ವ್ಯವಸ್ಥೆಯನ್ನೇ ಹೊಂದಿದ್ದರು. ಒಟ್ಟಿನಲ್ಲಿ ಏಕಕಾಲಕ್ಕೆ ಎರಡೆರಡು ಬೇಜವಾಬ್ದಾರಿಯುತ ಆಡಳಿತಗಳಿಗೆ ಅಂದರೆ ಬ್ರಿಟಿಷ್ ಹಾಗೂ ರಾಜರ ಆಳ್ವಿಕೆಗೆ ಒಳಗಾಗಿದ್ದ ದೇಶಿ ಸಂಸ್ಥಾನಗಳ ಪ್ರಜೆಗಳನ್ನು 'ಜೋಡಿ ಗುಲಾಮರು' ಎಂದು ಕರೆಯುತ್ತಿದ್ದರು.[೩]

ಭಾರತಕ್ಕೆ ಸ್ವಾತಂತ್ರ್ಯ ಬಂದು ಎಲ್ಲ ಪ್ರಾಂತ್ಯಗಳಲ್ಲೂ ಪ್ರಜಾಸತ್ತಾತ್ಮಕ ಪ್ರಭುತ್ವವಿದ್ದರೂ ಮೈಸೂರು ಸಂಸ್ಥಾನದ ಜನರು ಪ್ರಜಾತಾಂತ್ರಿಕ ಜವಾಬ್ದಾರಿ ಸರ್ಕಾರವನ್ನು ಪಡೆಯದೇ ವಂಚಿತರಾದರು. ರಾಷ್ಟ್ರದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತ್ಯಾಗವನ್ನು ಮೈಸೂರು ಜನತೆ ಮಾಡಿದ್ದರೂ, ಸ್ವಾತಂತ್ರ್ಯ ನಂತರವೂ ನಿರಂಕುಶ ಪ್ರಭುತ್ವದ ಅಡಿಯಲ್ಲಿರುವಂತಹ ವಿಪರ್ಯಾಸ ಪರಿಸ್ಥಿತಿ ಉಂಟಾಗಿದ್ದಿತು.[೪] ರಾಜ್ಯದ ಮೂಲ ಸಾಮಗ್ರಿ ಪ್ರಜೆ, ಆ ಮೇಲೆ ಬರತಕ್ಕವರು ರಾಜರು ಪ್ರಜೆಗಳ ಹಿತ ಸಾಧನೆಯೇ ರಾಜ್ಯದ ಮೊದಲನೆಯ ಕರ್ತವ್ಯ "ಆ ಕರ್ತವ್ಯವನ್ನು ನೆರವೇರಿಸಲು ನಿರಂಕುಶನಾದ ಜನಹಿತಕ್ಕೆ ಅಸಂಗತವಾದದ್ದೇ ಇಂಥಹ ನಿರಂಕುಶ ಪ್ರವರ್ತನೆಯ ಲಕ್ಷಣವೇ ಈಗ ನಮ್ಮ ದೇಶೀಯ ಸಂಸ್ಥಾನಗಳಲ್ಲಿ ದೊಡ್ಡದಾಗಿ ಎದ್ದುಕಾಣುವ ದೋಷ ನಮ್ಮ ಸಂಸ್ಥಾನದ ಪ್ರಭುಗಳು ರಾಜ್ಯಾಧಿಕಾರದಲ್ಲಿ ತಮ್ಮ ಪ್ರಜೆಗಳನ್ನು ಪ್ರತ್ಯಕ್ಷ ಭಾಗಸ್ಥರನ್ನಾಗಿ ಮಾಡಿ

ಪ್ರಜಾಸಮ್ಮತವಾದ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಬೇಕು" ಎಂದು ಡಿ.ವಿ.ಜಿಯವರು ಅಭಿಪ್ರಾಯಪಟ್ಟರು.[೫] ಒಟ್ಟಾಗಿ ಮೈಸೂರು ಕಾಂಗ್ರೆಸ್ ನೇತೃತ್ವದಲ್ಲಿ ೯ ಜಿಲ್ಲೆಗಳನ್ನೊಳಗೊಂಡ ಮೈಸೂರು ಸಂಸ್ಥಾನದ ನಿರಂಕುಶ ಪ್ರಭುತ್ವವನ್ನು ಮಟ್ಟ ಹಾಕಲು ಪ್ರಜೆಗಳು ಮುಂದಾಗಿ, ಪ್ರಪಂಚದ ಇತರ ದೇಶಗಳ ರಾಜ್ಯಭಾರ ಕ್ರಮದಿಂದ ಪ್ರಭಾವಿತರಾದ ಉದಾರ ನೀತಿಯ ವಿಚಾರವಂತರು ಜವಾಬ್ದಾರಿ ಸರ್ಕಾರ ಯೋಜನೆಯನ್ನು ಹಲವು ದಶಕಗಳ ಹಿಂದೆಯೇ ಜನರ ಮುಂದಿಟ್ಟು, ಅದಕ್ಕೆ ೧೯೪೭ ಆಗಸ್ಟ್ ೧೫ರ ನಂತರ ಚಳವಳಿಯ ಮೂಲಕ ವಿದ್ಯುಕ್ತ ಚಾಲನೆ ನೀಡಿದರು.

ಸಾಮಾನ್ಯವಾಗಿ ಅಧಿಕಾರದಲ್ಲಿದ್ದುಕೊಂಡು ಮಿತಿ ಇಲ್ಲದ ಸೌಲಭ್ಯಗಳನ್ನು ಅನುಭವಿಸಿಕೊಂಡು ಬಹುತೇಕ ನಿರಂಕುಶ ಆಡಳಿತವನ್ನು ನಡೆಸುತ್ತಿದ್ದವರು ತಾವಾಗಿಯೇ ಮುಂದೆ ಬಂದು ತಮ್ಮ ಅಧಿಕಾರವನ್ನು ಕಡಿದುಕೊಳ್ಳುವುದಿಲ್ಲ. ಅಂತಹ ನಿರಂಕುಶ ಅಧಿಕಾರವನ್ನು ಕೆಳಗಿಳಿಸಲು ಜನರು ಒಂದಾಗಿ ಚಳವಳಿಯ ಮಾರ್ಗವನ್ನು ಹಿಡಿಯುತ್ತಾರೆ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿನ ಬಿಸಿ ಇರುವಾಗಲೇ, ಮೈಸೂರು ಸಂಸ್ಥಾನದಲ್ಲಿ ಕೊನೆಯ ಹಾಗೂ ಬಲಯುತವಾದ ಚಳವಳಿ ಆರಂಭವಾಯಿತು. ಕಾರಣ ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಅವರಿಗೆ ಇದ್ದದ್ದು ಒಂದೇ ಮಾರ್ಗ ಅದು ಚಳವಳಿ ಅದೇ 'ಮೈಸೂರು ಚಲೋ ಚಳವಳಿ'.

## ೪.೧ ಮೈಸೂರು ಕಾಂಗ್ರೆಸ್

ಬ್ರಿಟಿಷ್ ಭಾರತದಲ್ಲಿ ಬ್ರಿಟಿಷರ ಆಡಳಿತ ನೀತಿಯನ್ನು ಪ್ರಶ್ನಿಸಲು ೧೮೮೫ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಸ್ಥಾಪನೆಯಾಗಿ ಭಾರತದ ರಾಜಕೀಯದಲ್ಲಿ ಒಂದು ಹೊಸ ಶಕೆಯನ್ನು ಆರಂಭಿಸಿತು. ರಾಜಕೀಯ ಕ್ಷೇತ್ರದಲ್ಲಿ ಪ್ರಮುಖವಾಗಿ ಆಡಳಿತ ಮತ್ತು ಶಾಸನಗಳ ಸುಧಾರಣೆಗೆ ಒಂದು ಪರಿಧಿಯನ್ನು ರೂಪಿಸಿತು. ರಾಷ್ಟ್ರೀಯ ಕಾಂಗ್ರೆಸ್ ಮೈಸೂರು ಸಂಸ್ಥಾನದ ರಾಜಕೀಯ ಬೆಳವಣಿಗೆಗೆ ಕಾರಣವಾಯಿತು. ೧೯೦೫ರ ನಂತರದ ಚಳವಳಿಗಳು ಸಂಸ್ಥಾನಗಳ ಮೇಲೂ ಪ್ರಭಾವ ಬೀರಿ ಹೊಸ ಅಲೆಯನ್ನು ಉಂಟುಮಾಡಿತು. ಅದೇ ರೀತಿ ಸಂಸ್ಥಾನದ ವೃತ್ತ ಪತ್ರಿಕೆಗಳು ಹಾಗೂ ನಾಯಕರುಗಳ ಭಾಷಣಗಳು ಪ್ರಜೆಗಳಲ್ಲಿ ಜಾಗೃತಿಯನ್ನು ಉಂಟುಮಾಡಿತು. ಭಾರತದಲ್ಲಿನ ಉಗ್ರಗಾಮಿ ಮತ್ತು ತೀವ್ರಗಾಮಿ ನಾಯಕರುಗಳೂ ಸಹ ಮೈಸೂರು ಸಂಸ್ಥಾನದಲ್ಲಿ ಕ್ರಾಂತಿ ಹರಡಲು ಕಾರಣರಾದರು. ಕೊನೆಗೆ ರಾಜಕೀಯ ಜಾಗೃತಿಯ ಬೆಳವಣಿಗೆಯಲ್ಲಿ ಮೈಸೂರು ಸಂಸ್ಥಾನದ ಜನತೆ ಬೇರೆ ಸಂಸ್ಥಾನಗಳಿಗೆ ಮಾದರಿಯಾಯಿತು.

ಮೊದಲನೇ ಪ್ರಪಂಚ ಯುದ್ಧದಲ್ಲಿ ಅಮೇರಿಕಾದ ಅಧ್ಯಕ್ಷ ವುಡ್ರೋವಿಲ್ಸನ್ 'ಸಣ್ಣ ರಾಷ್ಟ್ರಗಳಿಗೆ ರಕ್ಷಣೆ ಒದಗಿಸುವುದು ಮತ್ತು ಜನಾಭಿಪ್ರಾಯದಂತೆ ಸರ್ಕಾರ

ವ್ಯವಸ್ಥೆಗೊಳಿಸುವುದು[೬] ಮೊದಲ ಮಹಾಯುದ್ಧದ ಗುರಿಗಳೆಂದು ಘೋಷಿಸಿದರು. ಆಗ ಮೈಸೂರಿನ ಜನತೆ ಪ್ರಭಾವಿತರಾಗಿ ಜಾಗೃತರಾದರು. ರಾಷ್ಟ್ರೀಯ ಕಾಂಗ್ರೆಸ್‌ನ ಕಾರ್ಯ ಚಟುವಟಿಕೆ ಬ್ರಿಟಿಷ್ ಭಾರತದಲ್ಲಿ ಕಾರ್ಯ ಪ್ರವೃತ್ತವಾದ ಕಾರಣ, ದೇಶೀಯ ಸಂಸ್ಥಾನಗಳಲ್ಲಿ ಕಾಂಗ್ರೆಸ್ ಶಾಖೆಯನ್ನು ಆರಂಭಿಸಲು ಮುಂದಾಗಲಿಲ್ಲ. ಆಂಗ್ಲ ಭಾರತದಲ್ಲಿ ಕಾಂಗ್ರೆಸ್‌ನ ಅವಿರತ ಪ್ರಯತ್ನದಿಂದ ತಮ್ಮ ಹಕ್ಕುಗಳನ್ನು ತಿಳಿಯುವಲ್ಲಿ ಜಾಗೃತಿ ಮೂಡಿತು. ಆದರೆ ದೇಶೀಯ ಸಂಸ್ಥಾನಗಳಲ್ಲಿ ಜನ ಜಾಗೃತಿ ಮೂಡಿರಲಿಲ್ಲ. ೧೯೨೦ರಲ್ಲಿ ನಾಗಪುರದಲ್ಲಿ ನಡೆದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನದಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು ಭಾಷೆಯ ಆಧಾರದ ಮೇಲೆ ೨೧ ಪ್ರಾಂತೀಯ ಕಾಂಗ್ರೆಸ್ ಸಂಸ್ಥೆಗಳನ್ನಾಗಿ ಪುನರ್ರಚಿಸಿತು. ದೇಶೀಯ ಸಂಸ್ಥಾನಗಳಲ್ಲಿಯೂ ಕಾಂಗ್ರೆಸ್ ಪ್ರಚಾರವನ್ನು ವಿಸ್ತರಿಸಲು ಸಹಾಯಕವಾಗುವಂತೆ ಕಾಂಗ್ರೆಸ್ ಪ್ರಾಂತ್ಯದ ಪಕ್ಕದ ಸಂಸ್ಥಾನದ ಕಾಂಗ್ರೆಸ್‌ನ್ನು ಆಯಾ ಪ್ರಾಂತ್ಯದ ಜಿಲ್ಲಾ ಕಾಂಗ್ರೆಸ್ ಸಮಿತಿಯೆಂದು ಪರಿಗಣಿಸುವುದರ ಮೂಲಕ ಸಂಸ್ಥಾನದಲ್ಲಿ ಕಾಂಗ್ರೆಸ್ಸಿಗರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರಾಗಲು ಅವಕಾಶ ಲಭಿಸಿತು.[೭] ಹಾಗೆ ಕಾಂಗ್ರೆಸ್ ದೇಶೀಯ ಸಂಸ್ಥಾಗಳಲ್ಲಿ ಕಾಲಿಟ್ಟಿತ್ತಾದರೂ ಸಂಸ್ಥಾನದ ರಾಜಕೀಯದಲ್ಲಿ ಪ್ರವೇಶಿಸುವುದಿಲ್ಲವೆಂದು ಹೇಳಿತು.

ನಂತರ ೧೯೨೮ರ ಕಲ್ಕತ್ತಾ ಕಾಂಗ್ರೆಸ್ ಅಧಿವೇಶನದಲ್ಲಿ ಸಂಸ್ಥಾನದ ಆಂತರಿಕ ವ್ಯವಹಾರಗಳಲ್ಲಿ ಕೈ ಹಾಕಬಾರದು ಎಂಬ ನಿರ್ಬಂಧವನ್ನು ತೆಗೆದು ಹಾಕಿ ದೇಶೀಯ ರಾಜರನ್ನು ಪ್ರಜೆಗಳಿಗೆ ಮೂಲಭೂತ ಹಕ್ಕುಗಳನ್ನು ದೊರಕಿಸಿ ಕೊಡಬೇಕೆಂದು ಕೇಳಿಕೊಂಡಿತು. ತದನಂತರ ೧೯೨೯ರಲ್ಲಿ ಸಂಸ್ಥಾನಗಳ ಪ್ರಾತಿನಿಧಿಕ ಸಮ್ಮೇಳನ ಪ್ರಥಮ ಬಾರಿಗೆ ಮುಂಬೈನಲ್ಲಿ ನಡೆಯಿತು.[೮] ೧೯೨೦ರಲ್ಲಿ ಮೈಸೂರು ಸಂಸ್ಥಾನದ ಅನೇಕರು ಕಾಂಗ್ರೆಸ್‌ನ ಸದಸ್ಯರಾದರು. ೧೯೨೧ರಲ್ಲಿ ತಿಲಕರ ದಿನಾಚರಣೆಯನ್ನು ಆಚರಿಸಿ, ಜನಜಾಗೃತಿ ಮೂಡಿಸಿ ಕಾಂಗ್ರೆಸ್ ಸಂಸ್ಥೆಯು ಜನರನ್ನು ತನ್ನೆಡೆಗೆ ಸೆಳೆಯಿತು. ಎನ್.ಎನ್.ಸೆಟ್ಲೂರ್‌ರವರು ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ, ಎನ್.ಎನ್.ಎಂ ರಜ್ವಿಯವರು ಕಾರ್ಯದರ್ಶಿಯಾಗಿ ಆಯ್ಕೆಯಾದರು.[೯] ೧೯೨೯ರಲ್ಲಿ ಲಾಹೋರಿನಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ನೆಹರೂರವರ ಅಧ್ಯಕ್ಷತೆಯಲ್ಲಿ 'ಸ್ವಾತಂತ್ರ್ಯ ಪ್ರತಿಜ್ಞೆ' ಯನ್ನು ೧೯೩೦ರ ಜನವರಿ ೩೦ರಂದು ಕೈಗೊಂಡರು. ಅದೇ ರೀತಿ ಮೈಸೂರು ಸಂಸ್ಥಾನದಲ್ಲಿಯೂ ಕಾಂಗ್ರೆಸ್ ಸದಸ್ಯರು ಪ್ರತಿಜ್ಞೆ ಕೈಗೊಂಡರು. ಮೈಸೂರು ಕಾಂಗ್ರೆಸ್‌ನ ನಾಯಕರು ೧೯೩೧ರಲ್ಲಿ ಕರಾಚಿಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನಕ್ಕೆ ತೆರಳಿ ಅಲ್ಲಿ ನಿರ್ಮಿಸಿದ್ದ ಧ್ವಜ ಸ್ತಂಭವನ್ನು ನೋಡಿ ಬೆಂಗಳೂರಿನಲ್ಲಿಯೂ ಅದೇ ರೀತಿಯ ಧ್ವಜಸ್ತಂಭವನ್ನು ನಗರದ ರೈಲ್ವೆ ನಿಲ್ದಾಣದ ಎದುರು ಸ್ಥಾಪಿಸಿದರು.[೧೦]

೧೯೩೧ ಜೂನ್ ೨ರಂದು ನೆಹರೂರವರು ಮೈಸೂರು ಸಂಸ್ಥಾನದಲ್ಲಿ ತ್ರಿವರ್ಣ ಧ್ವಜವನ್ನು ಪ್ರಥಮ ಬಾರಿಗೆ ಹಾರಿಸಿದರು.[೧೧] ಮೈಸೂರು ಜಿಲ್ಲಾ ಕಾಂಗ್ರೆಸ್‌ನ ಐಕ್ಯತೆಯ ಸಮಯದಲ್ಲಿ ಜಾತಿಯ ವಿಷ ಬೀಜ ಬಿತ್ತಿ ಅನೇಕ ಗಲಭೆಗಳಾದವು. ಅದರಲ್ಲಿ ಗಣಪತಿ ಗಲಭೆಯು ಪ್ರಮುಖವಾಗಿದೆ.[೧೨] ಇದು ಬೆಂಗಳೂರಿನಲ್ಲಿ ಹಿಂದೂ–ಮುಸ್ಲಿಂ ಮೈತ್ರಿಗೆ ಭಂಗ ತಂದಿತು. ಹಿಂದುಳಿದ ವರ್ಗಗಳ ನಾಯಕರಲ್ಲೊಬ್ಬರಾಗಿದ್ದ ಅಬ್ಬಾಸ್ ಖಾನ್‌ರ ವಿರುದ್ಧ ಚಳವಳಿ ನಡೆಯಿತು. ಅಂತೆಯೇ ಮಿರ್ಜಾರವರು ಜಾತಿ ಪಕ್ಷಪಾತಿಯೆಂಬ ಆರೋಪಕ್ಕೊಳಗಾಗಿ ಅವರ ವಿರುದ್ಧವೂ ಚಳವಳಿ ನಡೆಯಿತು. ೧೯೧೭ರ ಡಿಸೆಂಬರ್ ೬ರಂದು ಎಂ. ಬಸವಯ್ಯನವರ ನಾಯಕತ್ವದಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಥಮ ರಾಜಕೀಯ ಪಕ್ಷವಾದ 'ಪ್ರಜಾಮಿತ್ರ ಮಂಡಳಿ' ಮತ್ತು ೧೯೨೯ರಲ್ಲಿ ಡಿ.ಎನ್. ಮಲ್ಲಪ್ಪ ಮತ್ತು ಅವರ ಸ್ನೇಹಿತರಿಂದ ಉದಯವಾದ 'ಪ್ರಜಾಪಕ್ಷ'ಗಳು ೧೯೩೪ರ ಸುಮಾರಿನಲ್ಲಿ ಒಂದುಗೂಡಿ ಮೈಸೂರು 'ಪ್ರಜಾ ಸಂಯುಕ್ತ ಸಂಸ್ಥೆ' ಎಂಬ ಹೆಸರಿನಲ್ಲಿ ಒಗ್ಗೂಡಿದವು. ಇವೆರಡರ ಗುರಿ ಜವಾಬ್ದಾರಿ ಸರ್ಕಾರ ಸ್ಥಾಪನೆ ಹಾಗೂ ಆಡಳಿತದಲ್ಲಿ ಎಲ್ಲ ವರ್ಗಗಳಿಗೆ ಹಾಗೂ ವರ್ಗದವರಿಗೆ ಪ್ರಾತಿನಿಧ್ಯ ಕೊಡುವುದು. ರಾಷ್ಟ್ರೀಯ ಕಾಂಗ್ರೆಸ್‌ನ ಕಾರ್ಯಕ್ರಮ ಜಾರಿಗೆ ತರುವುದು ಎಂದು ೧೯೩೫ನೆ ಜನವರಿಯಲ್ಲಿ ಹಾಸನದಲ್ಲಿ ನಡೆದ ಮೊದಲನೆ ರಾಜಕೀಯ ಅಧಿವೇಶನದಲ್ಲಿ ತೀರ್ಮಾನಿಸಲಾಯಿತು. ಈ ಹೊಸ ಸಂಯುಕ್ತ ಪಕ್ಷದಲ್ಲಿ ಕೆ.ಸಿ.ರೆಡ್ಡಿ, ವಿ.ವೆಂಕಟಪ್ಪ, ಹೆಚ್.ಸಿ.ದಾಸಪ್ಪ, ಹೆಚ್.ಸಿದ್ದಯ್ಯ ಮುಂತಾದ ಕಾರ್ಯಕರ್ತರಿದ್ದುದರಿಂದ ಪಕ್ಷದ ಏಳಿಗೆಗೆ ಸಹಕಾರಿಯಾಯಿತು.

ಸಂಸ್ಥಾನದಲ್ಲಿ ನಡೆಯುವ ಚುನಾವಣೆಗಳಲ್ಲಿ ಮೈಸೂರು ಸಂಸ್ಥಾನದ ಕಾಂಗ್ರೆಸ್ ಕೂಡ ಸ್ಪರ್ಧಿಸಲು ರಾಷ್ಟ್ರೀಯ ಕಾಂಗ್ರೆಸ್ ಸಮಿತಿಯ ಅನುಮತಿ ಕೋರಿತು. ಸಂಸ್ಥಾನಗಳ ರಾಜಕೀಯದಲ್ಲಿ ನೇರವಾಗಿ ಪ್ರವೇಶಿಸದಿರುವುದು, ರಾಷ್ಟ್ರೀಯ ಕಾಂಗ್ರೆಸ್‌ನ ಧೋರಣೆಯಾಗಿದ್ದುದರಿಂದ ಪಾರ್ಲಿಮೆಂಟರಿ ಕಾರ್ಯ ಕ್ರಮದಲ್ಲಿ ಭಾಗವಹಿಸಲು ಮೈಸೂರು ಕಾಂಗ್ರೆಸ್ ನಾಯಕರು ಅನುಮತಿ ಕೋರಿದರು. ಅಂದಿನ ರಾಷ್ಟ್ರೀಯ ಕಾಂಗ್ರೆಸ್ಸನ್ನು ಯವುದಕ್ಕೂ ಗುರಿ ಮಾಡದೆ ದೇಶೀಯ ಸಂಸ್ಥಾನಗಳ ಸ್ವಾತಂತ್ರ್ಯ ಚಳವಳಿಗೆ ತಮ್ಮ ಸಹಾನುಭೂತಿ ಮತ್ತು ಬೆಂಬಲವಿದೆಯೆಂದು ಕಾಂಗ್ರೆಸ್ ಅಧ್ಯಕ್ಷರಾದ ನೆಹರೂ ತಿಳಿಸಿದರು.[೧೩] ೧೯೩೭ರ ಮಾರ್ಚ್ ತಿಂಗಳಲ್ಲಿ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳಲ್ಲಿ ನಡೆದ ಚುನಾವಣೆಗಳಲ್ಲಿ ಸಂಸ್ಥಾನಿ ಕಾಂಗ್ರೆಸ್ ಪ್ರಥಮ ಬಾರಿಗೆ ಭಾಗವಹಿಸಿತು.[೧೪]

'ಸಂಯುಕ್ತ ಪ್ರಜಾಪಕ್ಷ' ಮತ್ತು 'ಮೈಸೂರು ಜಿಲ್ಲಾ ಕಾಂಗ್ರೆಸ್' ಮೈಸೂರು ಸಂಸ್ಥಾನದ ರಾಜಕೀಯದಲ್ಲಿ ಪ್ರಮುಖ ಪಕ್ಷಗಳಾಗಿದ್ದವು. ಇವು ಒಟ್ಟುಗೂಡಿದರೆ ಬಲ ಬರುತ್ತದೆಂದು ಒಂದು ಸಭೆಯನ್ನು ಕರೆದರು. ಅದೇ ಸಂದರ್ಭದಲ್ಲಿ ದಿವಾನ್ ಮಿರ್ಜಾ ಇಸ್ಮಾಯಿಲ್

ಪ್ರಜಾನಾಯಕರನ್ನು ಅವಹೇಳನ ಮಾಡಿದರು. ಈ ಅಂಶವು ಪಕ್ಷಗಳ ಒಟ್ಟುಗೂಡುವಿಕೆಗೆ ಉತ್ತೇಜನ ನೀಡಿದಂತಾಯಿತು. ಅದೇ ರೀತಿ ೨ ಪಕ್ಷಗಳು ಒಂದಾದವು. ನಂತರ ಮೈಸೂರು ಕಾಂಗ್ರೆಸ್ ಬೋರ್ಡ್ ಎಂದಾಗಿ ೧೯೩೭ರ ಮೇ ತಿಂಗಳಲ್ಲಿ ಬೆಂಗಳೂರಿನಲ್ಲಿ ನಡೆದ ಮೊದಲ ಸಮ್ಮೇಳನದಲ್ಲಿ ಟಿ.ಸಿದ್ದಲಿಂಗಯ್ಯನವರು ಅಧ್ಯಕ್ಷರಾದರು. ಆಗ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷವನ್ನು ಬಲಪಡಿಸಲು ಅನೇಕ ರಾಷ್ಟ್ರೀಯ ನಾಯಕರು ಪ್ರಚಾರ ಮಾಡಿದರು. ಜವಾಬ್ದಾರಿ ಸರ್ಕಾರ ಮತ್ತು ಕಾಂಗ್ರೆಸ್ ಧ್ವಜದ ಅಂಗೀಕರಣೆಗಾಗಿ ಮೈಸೂರು ಸಂಸ್ಥಾನದಲ್ಲಿ ನಡೆಯುತ್ತಿದ್ದ ಚಳವಳಿಯನ್ನು ತುಳಿಯಲು ಸಂಸ್ಥಾನದ ಸರ್ಕಾರವು ಬಹುವಾಗಿ ಪ್ರಯತ್ನಿಸಿತು. ೧೯೩೮ರಲ್ಲಿ ಮೈಸೂರು ಕಾಂಗ್ರೆಸ್ ಬೋರ್ಡಿನ ೨ನೇ ಸಮ್ಮೇಳನ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಚಿತ್ರದುರ್ಗದಲ್ಲಿ ನಡೆಯಿತು.

ರಾಷ್ಟ್ರೀಯ ಕಾಂಗ್ರೆಸ್‌ನ ಅಂಗವಾಗಿದ್ದ ಮೈಸೂರು ಕಾಂಗ್ರೆಸ್ ಸಮಿತಿಯು ಚಳವಳಿಯನ್ನು ಆರಂಭಿಸಿದ ಮೇಲೆ ಸಂಸ್ಥಾನದಲ್ಲಿ ರಾಜಕೀಯ ಪರಿಸ್ಥಿತಿ ಬದಲಾಯಿಸಲ್ಪಟ್ಟಿತು. ರಾಷ್ಟ್ರೀಯ ಕಾಂಗ್ರೆಸ್ ಮೈಸೂರು ಸಂಸ್ಥಾನದ ಚಳವಳಿಗೆ ಬೆಂಗಾವಲಾಗಿ ನಿಂತು ಪ್ರೋತ್ಸಾಹಿಸಿತು. ಇದನ್ನು ಗಾಂಧೀಜಿ ವಿರೋಧಿಸಿ ತಮ್ಮ 'ಹರಿಜನ' ಪತ್ರಿಕೆಯಲ್ಲಿ ಲೇಖನ ಬರೆದರು.[೧೫] ಈ ಲೇಖನದ ಅನೇಕ ಪ್ರತಿಗಳನ್ನು ಅಚ್ಚು ಹಾಕಿಸಿ ಮಿರ್ಜಾರವರು ಮೈಸೂರು ಸಂಸ್ಥಾನದ ಪ್ರಜೆಗಳಿಗೆ ಹಂಚಿ, ಮೈಸೂರು ಕಾಂಗ್ರೆಸ್ ಸಮಿತಿಯನ್ನು ಬಗ್ಗು ಬಡಿಯಲು ಪ್ರಯತ್ನಿಸಿದರು. ಆದರೆ ರಾಷ್ಟ್ರೀಯ ಕಾಂಗ್ರೆಸ್‌ನಲ್ಲಿ ನೆಹರೂರವರು ಸಂಸ್ಥಾನದ ಸತ್ಯಾಗ್ರಹವನ್ನು ಪ್ರೋತ್ಸಾಹಿಸಿದರು. ನಂತರ ವಾರ್ಧಾದಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿ ದೇಶೀಯ ಸಂಸ್ಥಾನಗಳಲ್ಲಿ ರಾಷ್ಟ್ರೀಯ ಶಾಖೆಗಳು ಇರಕೂಡದೆಂದು, ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ನಡೆಯುವ ಹೋರಾಟವು ಅದಕ್ಕಾಗಿ ಸ್ಥಾಪಿತವಾದ ಸ್ವತಂತ್ರ ಸಂಸ್ಥೆಗಳ ಮೂಲಕ ನಡೆಯಬೇಕೆ ವಿನಃ ರಾಷ್ಟ್ರೀಯ ಕಾಂಗ್ರೆಸ್‌ನ ಹೆಸರಿನಲ್ಲಿ ನಡೆಯಕೂಡದೆಂದು ನಿರ್ಣಯ ಮಾಡಿದರು.[೧೬] ೧೯೩೮ರಲ್ಲಿ ಫೆಬ್ರವರಿಯಲ್ಲಿ ಹರಿಪುರದಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶದಲ್ಲಿ ಗಾಂಧಿಜೀಯವರಿಂದ ಒಂದು ಅಂಗೀಕೃತವಾದ ನಿರ್ಣಯವು ಹೊರಬಿದ್ದಿತು. ಅದೇನೆಂದರೆ "ಪ್ರತ್ಯಕ್ಷವಾಗಿ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯು ದೇಶೀಯ ಸಂಸ್ಥಾನಗಳ ರಾಜಕೀಯದಲ್ಲಿ ಕೈಹಾಕುವುದಿಲ್ಲವೆಂದೂ, ಆದರೆ ಕಾಂಗ್ರೆಸ್ ಸದಸ್ಯರು ವೈಯಕ್ತಿಕವಾಗಿ ಭಾಗವಹಿಸಬಹುದೆಂದೂ ಆಯಿತು" ಹಾಗೆಯೇ ದೇಶೀಯ ಸಂಸ್ಥಾನಗಳು ತಮ್ಮ ರಾಜಕೀಯ ಚಳುವಳಿಗಾಗಿ ಸ್ವತಂತ್ರ ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳಬೇಕೆಂದೂ ಆ ನಿರ್ಣಯ ಸೂಚಿಸಲ್ಪಟ್ಟಿತು.[೧೭]

೧೯೩೮ರ ಫೆಬ್ರವರಿ ೨೮ರಂದು ಮಹಾಶಿವರಾತ್ರಿಯ ದಿನವೇ ರಾಜಧಾನಿ ಮೈಸೂರು ನಗರದಲ್ಲಿ ಮೈಸೂರು ಕಾಂಗ್ರೆಸ್ ಬೋರ್ಡಿನ ಸಭೆ ನಡೆಯಿತು. ಕೊನೆಗೆ ಮಹಾರಾಜರ

ಆಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿಸಲು ರಾಷ್ಟ್ರೀಯ ಕಾಂಗ್ರೆಸಿಗೆ ಸಂಬಂಧವಿಲ್ಲದ ಸ್ವತಂತ್ರವಾದ "ಮೈಸೂರು ಕಾಂಗ್ರೆಸ್" ಎಂಬ ಹೊಸ ಸಂಸ್ಥೆಯನ್ನು ಆರಂಭಿಸಿದರು.[೧೮] ಅಧ್ಯಕ್ಷರನ್ನಾಗಿ ಟಿ.ಸಿದ್ದಲಿಂಗಯ್ಯನವರನ್ನು ಆಯ್ಕೆ ಮಾಡಿ ಹೆಚ್ಚಿನ ವಿಷಯಗಳ ಚರ್ಚೆಯನ್ನು ಮಂಡ್ಯ ಜಿಲ್ಲೆ ಶಿವಪುರದಲ್ಲಿ ನಡೆಯುವ ಪ್ರಥಮ ಕಾಂಗ್ರೆಸ್ ಅಧಿವೇಶನದಲ್ಲಿ ತೀರ್ಮಾನಿಸಲಾಗುವುದು ಎಂದು ತಿಳಿಸಲಾಯಿತು. ಸ್ವಾಗತ ಸಮಿತಿಯ ಅಧ್ಯಕ್ಷರನ್ನಾಗಿ ಸಾಹುಕಾರ ಚನ್ನಯ್ಯನವರು ನೇಮಿಸಲ್ಪಟ್ಟರು. ನಂತರ ಮೈಸೂರು ಕಾಂಗ್ರೆಸ್ಸನ್ನು ಮಾನ್ಯ ಮಾಡಿ ಸುಧಾರಣಾ ಸಮಿತಿಯಲ್ಲಿ ಅದಕ್ಕೆ ಪ್ರಾತಿನಿಧ್ಯ ಕೊಡಬೇಕೆಂದೂ, ಜವಾಬ್ದಾರಿ ಸರ್ಕಾರ ಸ್ಥಾಪನೆಯೇ ಸುಧಾರಣೆಗಳ ಅಂತಿಮ ಗುರಿಯೆಂದು ಸರ್ಕಾರವು ಒಪ್ಪಬೇಕೆಂದು ಮನವಿ ಮಾಡಿದರು. ಆದರೆ ಮೈಸೂರು ಸರ್ಕಾರ ಇದನ್ನು ತಿರಸ್ಕರಿಸಿತು. ಆಗ ಹೋರಾಟವು ಅನಿವಾರ್ಯವಾಯಿತು. ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹದಿಂದಲೇ ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ ಚರಿತ್ರೆಯಲ್ಲಿ ಅಂದಿನಿಂದಲೇ ಶಕ್ತಿಯುತವಾಗಿ ಆರಂಭವಾಯಿತು. ಶಿವಪುರದಲ್ಲಿ ನಡೆಯುವ ಅಧಿವೇಶನಕ್ಕೆ ಮೈಸೂರು ಪೊಲೀಸ್ ನಿಬಂಧನೆ ೩೯ನೇ ಸೆಕ್ಷನ್ ಪ್ರಕಾರ ಮೈಸೂರು ಜಿಲ್ಲಾ ನ್ಯಾಯಾಧೀಶರು ಒಂದು ಆಜ್ಞೆ ಹೊರಡಿಸಿದರು. ಒಂದು ತಿಂಗಳ ಕಾಲ ಶಿವಪುರ ಹಾಗೂ ಅದರ ೨ ಮೈಲಿ ಸುತ್ತಳತೆಯಲ್ಲಿ ರಾಷ್ಟ್ರಧ್ವಜಾರೋಹಣ ಮಾಡಕೂಡದೆಂದು ತಿಳಿಸಿದರು,[೧೯] ಆದರೂ ಸಹ ನಿಯಮಗಳನ್ನು ಉಲ್ಲಂಘಿಸಿ ಟಿ.ಸಿದ್ದಲಿಂಗಯ್ಯನವರು ಧ್ವಜಾರೋಹಣ ಮಾಡಿದರು. ಆಗ ಅವರನ್ನು ಪೊಲೀಸರು ಬಂಧಿಸಿದರು. ಜೊತೆಗೆ ಅನೇಕ ಕಾರ್ಯಕರ್ತರು ಬಂಧನಕ್ಕೊಳಗಾದರು. ಅಧ್ಯಕ್ಷರು ಅವರ ಸ್ಥಾನಕ್ಕೆ ಹಂಗಾಮಿಯಾಗಿ ಹೆಚ್.ಸಿ.ದಾಸಪ್ಪನವರನ್ನು ನೇಮಿಸಿದರು.

ಶಿವಪುರದಲ್ಲಿ ಒಟ್ಟು ೧೮ ನಿರ್ಣಯಗಳು ಅಂಗೀಕೃತವಾದವು. ಅದರಲ್ಲಿ ಮುಖ್ಯವಾಗಿ ಜವಾಬ್ದಾರಿ ಸರ್ಕಾರ ಸ್ಥಾಪಿಸಬೇಕು, ಮೈಸೂರು ಕಾಂಗ್ರೆಸ್ ಪಕ್ಷವನ್ನು ಒಂದು ರಾಜಕೀಯ ಪಕ್ಷವೆಂದು ಅಂಗೀಕರಿಸಬೇಕು ಹಾಗೂ ಆಜನ್ಮಸಿದ್ದ ಹಕ್ಕುಗಳನ್ನು ಜನರಿಗೆ ಒದಗಿಸಬೇಕು, ಎಂದು ತಿಳಿಸಿದರು. ಇದಾದ ನಂತರದಲ್ಲಿ ಕೋಲಾರ ಜಿಲ್ಲೆಯ ವಿಧುರಾಶ್ವತ್ಥದಲ್ಲಿ ನಡೆದ ಗಲಭೆಯನ್ನು ಕುರಿತು ಗಾಂಧೀಜಿಯವರು "ರಾಷ್ಟ್ರೀಯ ಧ್ವಜದ ಬಗ್ಗೆ ಮೈಸೂರಿನಲ್ಲಿ ನಡೆಯುತ್ತಿರುವ ಚಳವಳಿಯು ಕಾಲ ಧರ್ಮವನ್ನು ಅನುಸರಿಸಿದೆ. ಈ ಸಂಧರ್ಭದಲ್ಲಿ ಸರ್ಕಾರವು ತನ್ನ ನಿರಂಕುಶ ವರ್ತನೆಯನ್ನು ಉಪಸಂಹರಿಸಿಕೊಂಡು ಮೈಸೂರು ಆಡಳಿತಕ್ಕೆ ಸಾರ್ವಜನಿಕ ಪ್ರತಿನಿಧಿಗಳನ್ನು ಜವಾಬ್ದಾರರನ್ನಾಗಿ ಮಾಡುವುದು ಸೂಕ್ತವಾದ ಮಾರ್ಗವೆಂದು ಮಹಾರಾಜರಿಗೂ ಹಾಗೂ ಸಲಹೆಗಾರರಾದ ಮಿರ್ಜಾರವರಿಗೂ ಸೂಚಿಸುತ್ತೇನೆ"[೨೦] ಎಂದು ಹೇಳಿದರು. ವಿಧುರಾಶ್ವತ್ಥ ಸಮಸ್ಯೆಯನ್ನು ಬಗೆಹರಿಸಲು ಬಂದ ಸರ್ದಾರ್ ಪಟೇಲ್ ಮತ್ತು ಕೃಪಲಾನಿಯವರು ಮೈಸೂರು ಸರ್ಕಾರದೊಡನೆ ಚರ್ಚೆ ನಡೆಸಿದ ನಂತರ ಪಟೇಲ್-ಮಿರ್ಜಾ ಒಪ್ಪಂದವಾಯಿತು. ಅದರಂತೆ ಸರ್ಕಾರವು ಮೈಸೂರು ಕಾಂಗ್ರೆಸ್ಸನ್ನು ಒಂದು ರಾಜಕೀಯ

ಪಕ್ಷವೆಂದು ಅಂಗೀಕರಿಸಿತು. ಕಾಂಗ್ರೆಸ್ಸಿನ ತ್ರಿವರ್ಣ ಧ್ವಜವನ್ನು ಮೈಸೂರು ಸಂಸ್ಥಾನದಲ್ಲಿ ಹಾರಿಸಬಹುದೆಂದು ಒಪ್ಪಿಕೊಂಡರು. ಎಲ್ಲ ರಾಜಕೀಯ ಬಂಧಿಗಳನ್ನು ಬಿಡುಗಡೆ ಮಾಡಿದರು. ನಂತರದ ದಿನಗಳಲ್ಲಿ ಮೈಸೂರು ಕಾಂಗ್ರೆಸ್ಸಿನ ಏಳಿಗೆಗಳನ್ನು ಸಹಿಸಲಾರದ ಮಿರ್ಜಾರವರು ಪಟೇಲ್-ಮಿರ್ಜಾ ಒಪ್ಪಂದವನ್ನು ಮುರಿದರು. ಕಾಂಗ್ರೆಸ್ಸಿಗರಿಗೆ ಸರ್ಕಾರವು ಮತ್ತೆ ಕಿರುಕುಳ ಕೊಡಲು ಆರಂಭಿಸಿತು. ನಂತರ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಯ ತೀರ್ಮಾನದಂತೆ ಪ್ರಜಾಪ್ರತಿನಿಧಿ ಸಭೆಗೆ ಮತ್ತು ನ್ಯಾಯವಿಧಾಯಕ ಸಭೆಗೆ ಕಾಂಗ್ರೆಸ್ಸಿಗರು ರಾಜಿನಾಮೆಯನ್ನು ಕೊಟ್ಟರು. ಹಾಗೂ ಜನ ಸಾಮಾನ್ಯರಲ್ಲಿ ಕಾಂಗ್ರೆಸ್ಸಿನ ಧ್ಯೇಯ, ತತ್ವಗಳನ್ನು ಪ್ರಚಾರ ಮಾಡಲು ರೈತರ ಸಭೆಗಳನ್ನು ನಡೆಸಿದರು.

ಮೈಸೂರು ಕಾಂಗ್ರೆಸ್ಸಿನ ೨ನೇ ಅಧಿವೇಶನ ೧೯೩೯ರ ಏಪ್ರಿಲ್ ೧೫ರಂದು ವಿಧುರಾಶ್ವತ್ಥದಲ್ಲಿ ನಡೆಯಿತು. ಹೆಚ್.ಸಿ.ದಾಸಪ್ಪನವರು ಅಧ್ಯಕ್ಷೀಯ ಭಾಷಣದಲ್ಲಿ ಸಂಸ್ಥಾನದ ಜನರು ಜವಾಬ್ದಾರಿ ಸರ್ಕಾರಕ್ಕೆ ಅರ್ಹರಾಗಿದ್ದಾರೆ ಎಂದು ತಿಳಿಸಿ ಅದರ ವಿರುದ್ಧ ಎಷ್ಟೇ ಅಪಪ್ರಚಾರ ಮಾಡಿದರೂ ಅದನ್ನು ಸುಳ್ಳಾಗಿಸಲು ಸಾಧ್ಯವಿಲ್ಲವೆಂದು, ಜವಾಬ್ದಾರಿ ಸರ್ಕಾರದ ಸ್ಥಾಪನೆಯ ಕೋರಿಕೆಯು ಜನತೆಯ ಹಕ್ಕೆಂದು ತಿಳಿಸಿದರು.[೨೧] ಕಾಂಗ್ರೆಸ್ ಪಕ್ಷದ ಆದೇಶದಂತೆ ಮೇ ತಿಂಗಳ ೧೯ರಂದು ಮೈಸೂರು ಕಾಂಗ್ರೆಸ್ ಸಪ್ತಾಹ ಆಚರಿಸಲ್ಪಟ್ಟಿತು. ಸರ್ಕಾರವು ಕಾಂಗ್ರೆಸ್‌ನ ಬೇಡಿಕೆಗಳನ್ನು ತಳ್ಳಿಹಾಕಿದಾಗ ೦೧-೦೯-೧೯೩೯ರಂದು ಸಂಸ್ಥಾನದ್ಯಾಂತ ಕಾನೂನು ಭಂಗ ಚಳವಳಿಯನ್ನು ನಡೆಸಿದರು. ಅದೇ ರೀತಿ ಸರ್ಕಾರ ಪಾನ ನಿರೋಧವನ್ನು ಜಾರಿಗೆ ತರಲಿಲ್ಲವೆಂದು ಅರಣ್ಯ ಸತ್ಯಾಗ್ರಹವನ್ನು ನಡೆಸಿದರು. ಈ ಸಂದರ್ಭದಲ್ಲಿ ಕಾಂಗ್ರೆಸ್‌ನ ಬೆಂಬಲಿಗ ಎಸ್.ನಿಜಲಿಂಗಪ್ಪನವರು ಪ್ರಥಮ ಬಾರಿಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಈ ಎಲ್ಲ ಚಳುವಳಿಗಳನ್ನು ನಿಲ್ಲಿಸಿ. ಮೈಸೂರು ಕಾಂಗ್ರೆಸ್ಸಿನ ಬಲವನ್ನು ಚುನಾವಣೆಗಳ ಮೂಲಕ ತೋರಿಸಬೇಕೆಂದು ಗಾಂಧೀಜಿ ಸಲಹೆ ಇತ್ತರು. ಈ ಸಲಹೆಗಳನ್ನು ೧೯೪೦ರ ಫೆಬ್ರವರಿಯಲ್ಲಿ ಸೇರಿದ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಒಪ್ಪಿಕೊಂಡಿತು.

ಮೈಸೂರು ಕಾಂಗ್ರೆಸ್ಸಿನ ೩ನೇ ಅಧಿವೇಶನ ಶಿವಮೊಗ್ಗದಲ್ಲಿ ೧೯೪೦ರ ಮೇ ತಿಂಗಳಲ್ಲಿ ನಡೆಯಿತು. ಇದರ ಅಧ್ಯಕ್ಷತೆಯನ್ನು ಕೆ.ಟಿ.ಭಾಷ್ಯಂ ವಹಿಸಿದ್ದರು. ಇವರು "ಆಂಗ್ಲ ಭಾರತದ ಪ್ರದೇಶಗಳಲ್ಲಿ ಸ್ವಯಂ ಆಡಳಿತವಿರುವುದರ ಪ್ರಭಾವದಿಂದ ಸಂಸ್ಥಾನದಲ್ಲಿಯೂ, ಜವಾಬ್ದಾರಿ ಸರ್ಕಾರದ ಬೇಡಿಕೆಯು ಹೆಚ್ಚಿದೆಯೆಂದು" ಅಧ್ಯಕ್ಷ ಭಾಷಣದಲ್ಲಿ ತಿಳಿಸಿದರು.[೨೨] ಈ ಹಿಂದೆ ಬಂದಿದ್ದ ರಾಜ್ಯಾಂಗ ಸುಧಾರಣೆ ನಿಯಮದ ಬಗ್ಗೆ ಮಂತ್ರಿಮಂಡಲವು ಶಾಸನ ಸಭೆಗೆ ಜವಾಬ್ದಾರಿಯಾಗಿಲ್ಲವಾದುದರಿಂದ ಸುಧಾರಣೆಗಳು ಅತೃಪ್ತಿಯುತವೂ ಆಶಾಭಂಗದಿಂದ ಕೂಡಿದವೂ ಆಗಿದ್ದು, ಒಪ್ಪುವುದು ಅಸಾಧ್ಯವೆಂದು ಕಾಂಗ್ರೆಸ್ ಸಮಿತಿ ತೀರ್ಮಾನಿಸಿತು.[೨೩] ೧೯೪೧ರ ಫೆಬ್ರವರಿ ೮ರಂದು ಸಂಸ್ಥಾನದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಸರ್ಕಾರ

ಅನೇಕ ತೊಂದರೆಗಳನ್ನು ನೀಡಿದರೂ ಸಹ ಪ್ರತಿನಿಧಿ ಸಭೆಯಲ್ಲಿ ೧೬೦ ಸ್ಥಾನಗಳಲ್ಲಿ ೧೧೧, ನ್ಯಾಯವಿಧಾಯಕ ಸಭೆಯಲ್ಲಿ ೨೦ ಸ್ಥಾನಗಳಲ್ಲಿ ೧೬ ಸ್ಥಾನಗಳಲ್ಲಿ ಕಾಂಗ್ರೆಸ್ಸಿಗರು ಚುನಾಯಿತರಾದರು. ಈ ಸಂದರ್ಭದಲ್ಲಿ ತಾಯಿನಾಡು ಪತ್ರಿಕೆ (೧೭ ಫೆಬ್ರವರಿ ೧೯೪೧) 'ಯಾರು ಏನೇ ಹೇಳಲಿ, ಯಾರು ಎಷ್ಟೇ ಟೀಕಿಸಲಿ, ಕಾಂಗ್ರೆಸ್ ಜನತೆಯ ಹೃದಯವನ್ನು ಸೂರೆಗೊಂಡಿದೆ'. ಇದು ಈ ಚುನಾವಣೆಯಿಂದ ದೃಢಪಟ್ಟಿದೆ ಎಂದು ಪ್ರಕಟಿಸಿತು. ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವ ಏಕೈಕ ಉದ್ದೇಶದಿಂದ ಶಾಸಕಾಂಗದ ಕಾರ್ಯಗಳಲ್ಲಿ ಕಾಂಗ್ರೆಸ್ ಭಾಗವಹಿಸಿ ಶಾಸನ ಸಭೆಗಳಲ್ಲಿ ಪ್ರಬಲ ವಿರೋಧ ಪಕ್ಷವಾಯಿತು. ಮೈಸೂರು ಕಾಂಗ್ರೆಸ್ಸಿನ ೪ನೇ ಅಧಿವೇಶನ ಹೆಚ್.ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ಹರಿಹರದ ಬಳಿ ಇರುವ ಹರಳಾಪುರದ ಹತ್ತಿರ ೧೯೪೧ರ ಏಪ್ರಿಲ್‌ನಲ್ಲಿ ನಡೆಯಿತು. ಸ್ವಾಗತ ಸಮಿತಿಯ ಅಧ್ಯಕ್ಷರಾದ ಎಸ್.ನಿಜಲಿಂಗಪ್ಪನವರು "ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ನಾವು ನಡೆಸುತ್ತಿರುವ ನಿರಂತರ ಪ್ರಯತ್ನದಲ್ಲಿ ಮೈಸೂರು ಕಾಂಗ್ರೆಸ್ಸಿನ ಪ್ರತಿ ಅಧಿವೇಶನವೂ ಒಂದೊಂದು ಗಣನೀಯ ಘಟ್ಟವಾಗಿರುವುದಲ್ಲದೇ, ನಮ್ಮ ಮುನ್ನಡೆಯ ಸ್ಪಷ್ಟವಾದ ಕುರುಹು ಆಗಿದೆ" ಎಂದರು.[೨೪] ೧೯೪೧ರ ಜುಲೈನಲ್ಲಿ ಚಿಕ್ಕಬಳ್ಳಾಪುರದಲ್ಲಿ ಸೇರಿದ್ದ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯವರು ಎಲ್ಲವನ್ನು ಸಮಾಲೋಚಿಸಿ ಈಗಿನ ಸರ್ಕಾರದ ಆಡಳಿತ ಕ್ರಮದಲ್ಲಿ ಪ್ರಜಾವರ್ಗದವರಿಗೆ ವಿಶ್ವಾಸವಿರುವುದಿಲ್ಲವೆಂದೂ, ಈಗಿನ ಸರ್ಕಾರದ ಪರಿಸ್ಥಿತಿಯು ಬದಲಾಗಿ ಜವಾಬ್ದಾರಿ ಸರ್ಕಾರದ ಸ್ಥಾಪನೆಯಾಗದೇ ಪ್ರಜಾವರ್ಗದವರಲ್ಲಿ ತೃಪ್ತಿಯಾಗಲಿ, ಶಾಂತಿಯಾಗಲಿ, ನೆಲೆಗೊಳ್ಳಲಾರದೆಂದು.......... ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಉಗ್ರವಾದ ಮತ್ತು ತೀವ್ರವಾದ ಚಳವಳಿ ಅವಶ್ಯಕವೆಂದೂ ಘೋಷಿಸಿದರು.[೨೫]



ತಾಳಕೆರೆ ಸುಬ್ರಮಣ್ಯಂರವರ ನೇತೃತ್ವದಲ್ಲಿ ೧೯೪೨ ಏಪ್ರಿಲ್ ೧೨ರಂದು ೫ನೇ ಮೈಸೂರು ಕಾಂಗ್ರೆಸ್ ಸಮ್ಮೇಳನ ಚನ್ನಪಟ್ಟಣದಲ್ಲಿ ನಡೆಯಿತು. ಅಧಿವೇಶನವು ಒಂದು ನಿರ್ಣಯದ ಮೂಲಕ ಸಂಸ್ಥಾನದ ಚಳವಳಿಯು ರಾಷ್ಟ್ರ ಚಳವಳಿಯ ಒಂದು ಭಾಗವೆಂದು, ಕಾರ್ಮಿಕ ಸಮಸ್ಯೆಗಳನ್ನು ಬಗೆಹರಿಸಲು ಕಾರ್ಮಿಕ ನಾಯಕರನ್ನೆಲ್ಲಾ ಬಿಡುಗಡೆ ಮಾಡಬೇಕೆಂದು, ಜನತೆಯ ಸಹಕಾರವನ್ನು ಪಡೆದಿರುವ ಸರಕಾರವನ್ನು ರಚಿಸಬೇಕೆಂದು ಮಹಾರಾಜರನ್ನು ಕೋರಿತು. ಅದೇ ಸಂದರ್ಭದಲ್ಲಿ ೧೯೪೨ರಲ್ಲಿ ನಡೆದ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಮೈಸೂರು ಸಂಸ್ಥಾನದಲ್ಲಿಯೂ ಸ್ವಾತಂತ್ರ್ಯಕ್ಕಾಗಿ ಹೋರಾಡುವ ವಿಶಾಲ ಮನೋಭಾವದಿಂದ ಎಲ್ಲ ಕಷ್ಟಗಳನ್ನು ಅನುಭವಿಸಿ ತ್ಯಾಗಕ್ಕೂ ಸಿದ್ದರಾಗಿ ಹೋರಾಡಿದರು. ಅದೇ ರೀತಿ ಭೂಗತರಾಗಿ ಅನೇಕ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದ್ದರು. ಉಳಿದ ಕಾಂಗ್ರೆಸ್ಸಿಗರು ನಿರ್ಬಂಧಕಾಜ್ಞೆಯನ್ನು ಉಲ್ಲಂಘಿಸುವುದು, ರಾಷ್ಟ್ರಧ್ವಜವನ್ನು ಹಾರಿಸುವುದು, ವಿದೇಶಿ ಬಟ್ಟೆ ಅಂಗಡಿ ಪಿಕೆಟಿಂಗ್ ಮಾಡುವುದು, ಮುಂತಾದ ಕೆಲಸಗಳಲ್ಲಿ ಸತ್ಯಾಗ್ರಹಿಗಳು ತೊಡಗಿದರು. ಮುಂದೆ ಈಸೂರಿನಲ್ಲಿಯೂ ಸಹ ಕಾಂಗ್ರೆಸ್ ನಾಯಕರು ಗ್ರಾಮಗಳನ್ನು ಹೋರಾಟಕ್ಕೆ

ತಯಾರು ಮಾಡಿ ಎಂದು ಪ್ರಚಾರ ಮಾಡಿದರು. ಗ್ರಾಮಸ್ಥರೆಲ್ಲರೂ ಸೇರಿ ಸ್ವರಾಜ್ಯ ಸರ್ಕಾರ ಸ್ಥಾಪಿಸಿ "ಬೇಜವಾಬ್ದಾರಿ ಸರ್ಕಾರದವರು ಯಾರು ಬರಕೂಡದೆಂದು, ಬಂದರೆ ......." ಎಂಬ ಒಂದು ಫಲಕ ಬರೆದು ಊರಿನ ಹೆಬ್ಬಾಗಿಲಿನಲ್ಲಿ ತೂಗು ಹಾಕಿದರು.[೨೬]

೧೯೪೫ರಲ್ಲಿ ನಡೆದ ಚುನಾವಣೆಗಳಲ್ಲಿ ನ್ಯಾಯವಿಧಾಯಕ ಸಭೆಯಲ್ಲಿ ೨೭ ಕ್ಕೆ ೧೮ ಹಾಗೂ ಪ್ರಜಾಪ್ರತಿನಿಧಿ ಸಭೆಯಲ್ಲಿ ೨೦೨ಕ್ಕೆ ೧೨೫ ಜನ ಕಾಂಗ್ರೆಸ್ಸಿಗರು ಜಯಗಳಿಸಿದರು. ಮಾರ್ಚ್ ೧೮ರಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕನನ್ನಾಗಿ ಕೆಂಗಲ್ ಹನುಮಂತಯ್ಯನವರನ್ನು, ನ್ಯಾಯವಿಧಾಯಕ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕನಾಗಿ ಕೆ.ಸಿ.ರೆಡ್ಡಿಯವರನ್ನು ಚುನಾಯಿಸಿದರು.[೨೭] ೧೯೪೨ರ ನಂತರ ಮೂರು ವರ್ಷಗಳ ಕಾಲ ಮೈಸೂರು ಕಾಂಗ್ರೆಸ್ಸಿನ ಸಾಮಾನ್ಯ ಅಧಿವೇಶನ ನಡೆಯಲಿಲ್ಲ. ಆದ ಕಾರಣ ಮೈಸೂರು ಕಾಂಗ್ರೆಸ್ಸಿನ ಪ್ರಥಮ ವಿಶೇಷ ಅಧಿವೇಶನವನ್ನು ತುಮಕೂರಿನಲ್ಲಿ ಜೂನ್ ತಿಂಗಳ ಮಧ್ಯೆ ನಡೆಯಿತು. ಆಗ ಸ್ವಾಗತ ಸಮಿತಿಯ ಅಧ್ಯಕ್ಷ ಮಾಲಿ ಮರಿಯಪ್ಪನವರು "ಮೈಸೂರು ಕಾಂಗ್ರೆಸ್ಸಿನ ರಾಜಕೀಯ ಗುರಿ ಕ್ಷಿಪ್ರದಲ್ಲಿಯೇ ಸಫಲವಾಗುತ್ತದೆ" ಎಂದು ಹೇಳಿದರು ಅಧ್ಯಕ್ಷ ಭಾಷಣದಲ್ಲಿ ಎಸ್.ನಿಜಲಿಂಗಪ್ಪನವರು ಸರ್ಕಾರದ ನೀತಿಯನ್ನು ಟೀಕಿಸುತ್ತಾ, "ಸರ್ಕಾರವನ್ನು ಪರಿವರ್ತಿಸಿ ಪ್ರಜಾಸೇವೆಗೆ ನಿಶ್ಚಿತ ಸಾಧನವಾಗಿ ಮಾಡುವ ಪ್ರಯತ್ನದಲ್ಲಿ ಕಾಂಗ್ರೆಸ್ ಮುಂದುವರಿಯಬೇಕು, ಪೇಚಿನಲ್ಲಿ ಸಿಕ್ಕಾಗ ಸ್ನೇಹ ಹೊಳೆದಾಟಿದ ಮೇಲೆ ಬೇರೆ ತರಹ......." ಹೀಗೆ ಸರ್ಕಾರ ನಡೆದುಕೊಳ್ಳುತ್ತಿದೆ. ಅನಿವಾರ್ಯವಾದಾಗ ಸಂಧಾನ ಮಾಡುವುದು. ಕೊಂಚ ಮೋಡ ಚದುರಿದರೆ ಮುಷ್ಟಿ ತೋರುವುದು, ಇಂದಿನ ಸಂಧಾನ ಸುಳ್ಳು ಎನ್ನುವುದು ಇದು ಸರ್ಕಾರದ ಪದ್ಧತಿ[೨೮] ಎಂದು ಹೇಳಿದರು.

ಬ್ರಿಟಿಷ್ ಪ್ರಧಾನಿಗೆ ಮೈಸೂರು ಕಾಂಗ್ರೆಸ್ ಅಧ್ಯಕ್ಷ ಎಸ್.ನಿಜಲಿಂಗಪ್ಪನವರು ೧೯೪೫ರಲ್ಲಿ ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿಸಲು ರಾಜರುಗಳಿಗೆ ಸೂಚನೆ ಕೊಡಬೇಕೆಂದು ಸಲಹೆ ಕೋರಿದರು. ಈ ಮಧ್ಯೆ ಮೈಸೂರು ದಿವಾನರಾಗಿ ಕಾಂಗ್ರೆಸ್ ಮತ್ತು ಜನತೆಯ ವಿರೋಧದ ನಡುವೆ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಆಗಸ್ಟ್ ೮ರಂದು ಅಧಿಕಾರ ಸ್ವೀಕರಿಸಿದರು. ಕೆ.ಸಿ.ರೆಡ್ಡಿಯವರ ನೇತೃತ್ವದಲ್ಲಿ ಮೈಸೂರು ಕಾಂಗ್ರೆಸ್ಸಿನ ೭ನೇ ಅಧಿವೇಶನ ೧೯೪೭ರ ನವೆಂಬರ್ ೨ರಂದು ಬೆಂಗಳೂರಿನಲ್ಲಿ ನಡೆಯಿತು. ಅಧ್ಯಕ್ಷರ ನುಡಿಯಲ್ಲಿ "ನಮ್ಮ ಧ್ಯೇಯ ಫಲಿಸುವವರೆಗೆ ಶಾಸನ ಸಭೆಗಳಲ್ಲಿ ಆಯಕಟ್ಟು ಸ್ಥಾನಗಳನ್ನು ನಾವು ಆಕ್ರಮಿಸಿಕೊಂಡು ಸಭೆಗಳ ಮುಖಾಂತರವಾಗಿಯೂ, ನಮ್ಮ ಹೋರಾಟವನ್ನು ಮುಂದುವರಿಸುವುದು ಸೂಕ್ತವಾದ ಮಾರ್ಗ. ಚಳವಳಿ ಉಗ್ರವಾಗಬೇಕು. ನಮ್ಮ ಧ್ಯೇಯ ಸಾಧನೆಗಾಗಿ ಅಹಿಂಸೆಯ ಅಡಿಗಲ್ಲಿನ ಮೇಲೆ ಎಲ್ಲಾ ವಿಧವಾದ ತ್ಯಾಗ, ಸಂಕಟಗಳಿಗೆ ನಾವು ಸಿದ್ಧರಾಗಬೇಕು"[೨೯] ಎಂದು ಹೇಳಿದರು.

೧೯೪೭ರ ಮಾರ್ಚ್ ಕೊನೆಯ ವಾರದಲ್ಲಿ ಅಖಿಲ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಅಧಿವೇಶನ ಕೋಲಾರ ಜಿಲ್ಲೆಯ ಬಂಗಾರ ಪೇಟೆಯಲ್ಲಿ ಸಭೆ ಸೇರಿತು. ರಾಜ್ಯಾಂಗ ರಚನೆಯನ್ನು ರಾಜ್ಯಾಂಗ ಸಭೆಗೆ ವಹಿಸಬೇಕೆಂದು ನೂತನ ರಾಜ್ಯಾಂಗ ರಚನೆಯಾಗುವವರೆಗೆ ತಾತ್ಕಾಲಿಕ ಸರ್ಕಾರ ರಚಿಸಬೇಕೆಂದು ತಿಳಿಸಿತು. ಕಾಂಗ್ರೆಸ್ಸಿನ ಕೋರಿಕೆಗಳನ್ನು ಸರ್ಕಾರ ಒಪ್ಪದಿದ್ದರೆ ಸಂಸ್ಥಾನದಲ್ಲಿ ಸತ್ಯಾಗ್ರಹ ಚಳವಳಿಯನ್ನು ಆರಂಭಿಸುವುದಾಗಿ ಹೇಳಿ ೧೦ ಅಂಶಗಳ ಯೋಜನೆಯೊಂದರ ಕರಡು ತಯಾರಿಸಿತು.[೩೦] ಇಡೀ ಭಾರತವೇ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವಾಗ, ಬ್ರಿಟಿಷ್ ಪ್ರಾಂತ್ಯದವರಿಗೆ ಸಿಕ್ಕಷ್ಟು ಹಕ್ಕುಗಳು, ಅಧಿಕಾರ ಸಿಗದೆ, ಜನರ ಯಾವ ಸಮಸ್ಯೆಗಳಿಗೂ ಪರಿಹಾರ ಸಾಧ್ಯವಿರಲಿಲ್ಲ. ಇದಕ್ಕೆ ಪರಿಹಾರ ರಾಜಪ್ರಭುತ್ವವನ್ನು ಮಟ್ಟಹಾಕಬೇಕು. ಎಂದು ಅರಿತ ಮೈಸೂರು ಕಾಂಗ್ರೆಸ್ ಎಲ್ಲ ಜನ ಸಮುದಾಯಗಳ ಆಶೋತ್ತರಗಳನ್ನು ನೆರವೇರಿಸುವ ಪ್ರಣಾಳಿಕೆಯನ್ನು ಜಾರಿಗೊಳಿಸಿದರೆ ಮಾತ್ರ ಜನ ಬೆಂಬಲ ಪಡೆಯಲು ಸಾಧ್ಯವೆಂದು, ಆ ಜನ ಬೆಂಬಲದಿಂದ ಈ ರಾಜಪ್ರಭುತ್ವವನ್ನು ಮಟ್ಟಹಾಕಬಹುದೆಂದು ತಿಳಿದು, ಆ ದಿಸೆಯಲ್ಲಿ ಯೋಜನೆಗಳನ್ನು ರೂಪಿಸಿತು. ಈ ರೀತಿಯಾಗಿ ೧೯೩೮ರಿಂದ ಮೈಸೂರು ಕಾಂಗ್ರೆಸ್ಸಿನ ಕಾರ್ಯ ಹೆಚ್ಚಾಗಿ, ಮೈಸೂರು ಕಾಂಗ್ರೆಸ್ ಪ್ರಜೆಗಳೊಂದಿಗೆ ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ಅನೇಕ ಚಳವಳಿ ಮಾಡಲು ಮುಂದಾಗಿ ಕೊನೆಗೆ 'ಮೈಸೂರು ಚಲೋ ಚಳವಳಿ'ಗೆ ಕರೆ ನೀಡಿತು.

## ೪.೨ ಚಳವಳಿಯ ಆರಂಭ

೧೯೪೭ರ ಆಗಸ್ಟ್ ೯ರಂದು ಮೈಸೂರು ನಗರದ ಟೌನ್‌ಹಾಲಿನಲ್ಲಿ ಕಾಂಗ್ರೆಸ್ ಅಧ್ಯಕ್ಷರ ನೇತೃತ್ವದಲ್ಲಿ ಸಭೆ ಸೇರಿ ಸತ್ಯಾಗ್ರಹ ಚಳವಳಿಯನ್ನು ಸೆಪ್ಟೆಂಬರ್ ೧ರಿಂದ ಆರಂಭಿಸುವ ತೀರ್ಮಾನ ಕೈಗೊಂಡರು. ಕೆ.ಸಿ.ರೆಡ್ಡಿಯವರು ತಮ್ಮ ಭಾಷಣದಲ್ಲಿ "ಕಾದು ನೋಡಿದ್ದು ಆಯಿತು, ಇನ್ನು ಉಳಿದಿರುವುದೊಂದೇ ಮಾರ್ಗ, ಅದು ಸತ್ಯಾಗ್ರಹ"[೩೧] ಎಂದು ಘೋಷಿಸಿದರು. ಅಧ್ಯಕ್ಷರ ಈ ಘೋಷಣೆ ಮೈಸೂರು ಸಂಸ್ಥಾನದಲ್ಲಿ ನಡೆದ ಕೊನೆಯ ಚಳವಳಿ 'ಮೈಸೂರು ಚಲೋ'ಗೆ ನಾಂದಿಯಾಡಿತು. ಈ ಮಧ್ಯೆ ಮೈಸೂರು ಸಂಸ್ಥಾನವು ಭಾರತದ ಒಕ್ಕೂಟಕ್ಕೆ ಸೇರಿದಾಗ ಮೈಸೂರು ಕಾಂಗ್ರೆಸ್ ಸ್ವಾಗತಿಸಿತು. ಆದರೂ ಸೆಪ್ಟೆಂಬರ್ ೧ರಿಂದಲೇ ಚಳವಳಿಯನ್ನು ಆರಂಭಿಸಲು ನಿರ್ಧರಿಸಿತು.

ಬ್ರಿಟಿಷರು ಭಾರತದ ಆಡಳಿತವನ್ನು ಪ್ರಜೆಗಳಿಗೆ ವಹಿಸಿ ೧೯೪೭ರ ಆಗಸ್ಟ್ ೧೫ರಂದು ಭಾರತದಿಂದ ನಿರ್ಗಮಿಸಿದರು. ಆ ದಿನ ಇಡಿ ದೇಶದಲ್ಲೆಲ್ಲಾ ತ್ರಿವರ್ಣ ಧ್ವಜ ಹಾರಿಸಿ ಸಂಭ್ರಮವನ್ನು ಆಚರಿಸಲಾಯಿತು. ಅದೇ ದಿನ ಜನತೆ ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯದ ದಿನವನ್ನು ವಿಜೃಂಭಣೆಯಿಂದ ಆಚರಿಸಿದರು. ಆದರೆ ಸಂಸ್ಥಾನದ ಸರ್ಕಾರವು ತ್ರಿವರ್ಣ ಧ್ವಜವನ್ನು ಹಾರಿಸದೇ, ಯಾವ ಕಾರ್ಯಕ್ರಮದಲ್ಲಿಯೂ ಭಾಗವಹಿಸಲು ಇಷ್ಟಪಡಲಿಲ್ಲ.

ಇದರಿಂದ ಮೈಸೂರು ಜನತೆ ದುಃಖಗೊಂಡು ಆಕ್ರೋಶಭರಿತರಾದರು. ಆದರೂ ಮೈಸೂರು ಕಾಂಗ್ರೆಸ್ ಮತ್ತು ಇತರೆ ಸಂಘ ಸಂಸ್ಥೆಗಳು ತ್ರಿವರ್ಣ ಧ್ವಜವನ್ನು ಹಾರಿಸಲು ಪ್ರತಿಜ್ಞೆ ಕೈಗೊಂಡು ಧ್ವಜಾರೋಹಣ ಮಾಡಿದರು. ಮೈಸೂರು ಚಲೋ ಚಳವಳಿಯನ್ನು ಆರಂಭಿಸಲು ತೀರ್ಮಾನಿಸಿ ೧೦ ಅಂಶಗಳ ಕಾರ್ಯಕ್ರಮವನ್ನು ಹೊರಡಿಸಿ ಸೆಪ್ಟೆಂಬರ್ ೧ರಿಂದ ಚಳವಳಿಯನ್ನು ಆರಂಭಿಸಲು ಮೈಸೂರು ಕಾಂಗ್ರೆಸ್ ತೀರ್ಮಾನಿಸಿತು. ಅರಮನೆ ಎದುರು ಸತ್ಯಾಗ್ರಹ ನಡೆಸಲು ಮುಂದಾದರು. ಕಾಂಗ್ರೆಸ್ ನಾಯಕರು ಸಂಸ್ಥಾನದಾದ್ಯಂತ ೯ ಜಿಲ್ಲೆಗಳಲ್ಲಿ ೨೧ರಿಂದ ೩೦ರವರೆಗೆ ಹೋರಾಟಕ್ಕೆ ಜನಬೆಂಬಲ ಪಡೆಯಲು ಪ್ರವಾಸ ಕೈಗೊಂಡರು.[೩೨] ಕಾಂಗ್ರೆಸ್ಸಿನ ರಚನಾ ವ್ಯವಸ್ಥೆಯನ್ನು ರದ್ದುಗೊಳಿಸಿ ಕೆ.ಸಿ. ರೆಡ್ಡಿಯವರನ್ನು ಚಳವಳಿಯ ಮಾರ್ಗಸೂಚಿಯನ್ನಾಗಿ ನೇಮಿಸಿ, ಸೆಪ್ಟೆಂಬರ್ ೧ರಿಂದಲೇ ಸತ್ಯಾಗ್ರಹವನ್ನು ಆರಂಭಿಸಬೇಕು, ಸಾರ್ವಜನಿಕ ಸಭೆಗಳನ್ನು ನಡೆಸಿ, ಸತ್ಯಾಗ್ರಹದ ಉದ್ದೇಶವನ್ನು ಪ್ರಜೆಗಳಿಗೆ ತಿಳಿಸಬೇಕು ಹಾಗೂ ಜವಾಬ್ದಾರಿ ಸರ್ಕಾರ ಮಾಡಬೇಕೆಂದು ಘೋಷಣೆ ಕೂಗಬೇಕು ಎಂದು ತೀರ್ಮಾನಿಸಲಾಯಿತು.[೩೩] ಇದನ್ನು ಮಟ್ಟಹಾಕಲು ಸರ್ಕಾರ ಜಿಲ್ಲಾಧಿಕಾರಿಗಳು ಮತ್ತು ನ್ಯಾಯಾಧೀಶರುಗಳಿಗೆ ಪರಿಸ್ಥಿತಿಗೆ ತಕ್ಕಂತೆ ತೀರ್ಮಾನ ಕೈಗೊಳ್ಳಲು ವಿಶೇಷ ಅಧಿಕಾರವನ್ನು ಕೊಟ್ಟಿತು.

ಈ ವೇಳೆಗೆ ಬೆಂಗಳೂರು ವಾಣಿಜ್ಯ ಸಂಘ ಸಮಿತಿಯ ಪರವಾಗಿ ಪಾಮಡಿ ಸುಬ್ಬರಾಮಶೆಟ್ಟರ ನೇತೃತ್ವದಲ್ಲಿ ಕಾಂಗ್ರೆಸ್ಸಿಗೂ ಮತ್ತು ಸರ್ಕಾರಕ್ಕೂ ಒಂದು ಸಂಧಾನ ಕಾರ್ಯ ಆರಂಭವಾಯಿತು. ಆದರೆ ಈ ಸಂಧಾನ ಕಾರ್ಯಕ್ಕೆ ಮಹಾರಾಜರು ಅಸಮ್ಮತಿಸಿದ ಕಾರಣ ವಿಫಲವಾಯಿತು. ಚಳವಳಿಯು ಒಗ್ಗೂಡುವುದನ್ನು ಕಂಡು ಮಹಾರಾಜರು ಆಗಸ್ಟ್ ೩೧ರಂದು ಕೆಲವು ಸುಧಾರಣೆಗಳನ್ನು ಕೈಗೊಂಡರು. ಆದರೆ ಅದರಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಅಂಶವಿರದ ಕಾರಣ ಕಾಂಗ್ರೆಸ್ ತಿರಸ್ಕರಿಸಿತು. ಮಹಾರಾಜರ ನಿರಂಕುಶತೆ ಹಾಗೂ ದಿವಾನರ ಆಡಳಿತದ ದಾಹ ಕಡಿಮೆಯಾಗಲಿಲ್ಲ. ಆದ್ದರಿಂದ ಮೊದಲೇ ನಿರ್ಧರಿಸಿದ ಸೆಪ್ಟೆಂಬರ್ ೧ರಿಂದ ಚಳವಳಿಗೆ ಮೈಸೂರು ಜನತೆ ದಾಪುಗಾಲು ಹಾಕಿದರು. ಅಂದು ಬೆಳಿಗ್ಗೆ ಸುಭಾಷ್ ನಗರದಲ್ಲಿ ಕೆ.ಸಿ.ರೆಡ್ಡಿಯವರು ಧ್ವಜಾರೋಹಣ ಮಾಡಿದರು. ಆಗ ಅವರು ಭಾಷಣ ಮಾಡುತ್ತಾ "ಮೈಸೂರು ಧ್ವಜವನ್ನು ನಾವು ಗೌರವಿಸುವುದಿಲ್ಲ ಏಕೆಂದರೆ ಮಹಾರಾಜರು ಆಗಸ್ಟ್ ೧೫ರಂದು ಸರ್ಕಾರದ ಕಛೇರಿಗಳ ಮೇಲೆ ರಾಷ್ಟ್ರಧ್ವಜ ಹಾರಿಸಲಿಲ್ಲ. ಇಡೀ ಪ್ರಪಂಚವೇ ಭಾರತದ ಸ್ವಾತಂತ್ರ್ಯ ದಿನ ಆಚರಿಸುವಾಗ ನಮ್ಮ ಮಹಾರಾಜರೇಕೆ ರಾಷ್ಟ್ರಧ್ವಜವನ್ನು ಹಾರಿಸಲಿಲ್ಲ? ಎಂದು ಹೇಳಿದರು.[೩೪] ಅದೇ ದಿನ ಸಾಯಂಕಾಲ ಬೆಂಗಳೂರು ಬನಪ್ಪ ಪಾರ್ಕಿನಲ್ಲಿ ಮೈಸೂರು ಚಲೋಗೆ ಸೆಪ್ಟೆಂಬರ್ ೪ರಿಂದ ಜಾಥಾಗಳು ಹೊರಡಬೇಕಾಗಿ ತಿಳಿಸಿದರು. ಬೆಂಗಳೂರಿನಿಂದ ಕಾಂಗ್ರೆಸ್ಸಿಗರು ಪಾದಯಾತ್ರೆಯಲ್ಲಿ ಮೈಸೂರಿಗೆ ಹೊರಟು, ಸೆಪ್ಟೆಂಬರ್ ೧೧ನೇ ತಾರೀಖು ಮೈಸೂರು ತಲುಪಿ ಅಂದು ಅರಮನೆ ಮುಂದೆ ಸತ್ಯಾಗ್ರಹ

ಮಾಡುವ ಕಾರ್ಯಕ್ರಮವನ್ನು ಘೋಷಿಸಿದರು.[೩೫] ಕೆ.ಸಿ.ರೆಡ್ಡಿಯವರು ಸತ್ಯಾಗ್ರಹ ಘೋಷಣೆ ಮಾಡಿ ಹಿಂದೆ ಸುಭಾಷ್‌ಚಂದ್ರ ಭೋಸ್ ಹೇಗೆ 'ಡೆಲ್ಲಿ ಚಲೋ' ಎಂದು ಘೋಷಣೆ ಮಾಡಿದ್ದರೋ, ಅದೇ ರೀತಿ ನಾವಿಂದು ಮೈಸೂರು ಕಾಂಗ್ರೆಸ್ಸಿನವರು 'ಮೈಸೂರು ಚಲೋ' ಎಂದು ಘೋಷಿಸುತ್ತಾ.[೩೬] ಅಂದಿನ ಸಭೆಯಲ್ಲಿ ೪ ಬೇಡಿಕೆಗಳನ್ನು ಹೊರಡಿಸಿದರು. ಅವುಗಳೆಂದರೆ,

೧. ಜವಾಬ್ದಾರಿ ಸರ್ಕಾರವನ್ನು ಕೂಡಲೇ ಆರಂಭಿಸಬೇಕು.

೨. ಚುನಾಯಿತ ಪ್ರತಿನಿಧಿಗಳಿಂದ ಕೂಡಿದ ರಾಜ್ಯಾಂಗ ರಚನಾ ಸಭೆಯನ್ನು ರಚಿಸಬೇಕು.

೩. ರಾಜ್ಯಾಂಗ ರಚನೆಯ ತನಕ ತಾತ್ಕಾಲಿಕ ಸರ್ಕಾರ ವೇರ್ಪಡಬೇಕು.

೪. ರಾಜಕೀಯ ಖೈದಿಗಳನ್ನು ಬಿಡುಗಡೆ ಮಾಡಬೇಕು.[೩೭]

ಈ ಸಭೆಯನ್ನು ಉದ್ದೇಶಿಸಿ ಟಿ.ಸಿದ್ದಲಿಂಗಯ್ಯನವರು "ಮಹಾರಾಜರನ್ನು ಬಿಡುಗಡೆ ಮಾಡುವುದೇ 'ಮೈಸೂರು ಚಲೋ' ಚಳುವಳಿಯ ಉದ್ದೇಶವೆಂದರು". ಅದೇ ರೀತಿ ಅಧ್ಯಕ್ಷತೆ ವಹಿಸಿದ ಕೆ.ಟಿ.ಭಾಷ್ಯಂರವರು "ನಾವು ಧರ್ಮ ಯುದ್ಧವನ್ನು ಆರಂಭಿಸಲು ಇಲ್ಲಿ ಸೇರಿದ್ದೇವೆ, ನಾವು ಮಾಡಬೇಕು ಇಲ್ಲ ಮಡಿಯಬೇಕು" ಎಂದು ಹೇಳಿದರು. ಮೈಸೂರಿನಲ್ಲಿ ಅಂದು ಎಸ್.ಚನ್ನಯ್ಯನವರ ಅಧ್ಯಕ್ಷತೆಯಲ್ಲಿ ಸುಬ್ಬರಾಯನಕೆರೆಯಲ್ಲಿ ಸಭೆ ನಡೆಸಿ[೩೮] ಚಳವಳಿಗೆ ಚೈತನ್ಯ ನೀಡಿದರು. ಹೀಗೆ ಚಳವಳಿಯು ಉಗ್ರರೂಪತಾಳಿ ಕರ್ನಾಟಕದಾದ್ಯಂತ ಹರಡಿ ಪ್ರಜಾಪ್ರಭುತ್ವ ವ್ಯವಸ್ಥೆಯ ಅನಿವಾರ್ಯತೆಯನ್ನು ಸಾರಿತು.

### ೪.೩ ಚಳವಳಿಯ ಹರಡುವಿಕೆ

ಮೈಸೂರು ಜಿಲ್ಲಾ ಕಾಂಗ್ರೆಸ್ ಚಳವಳಿಯ ಪೂರ್ವ ಸಿದ್ಧತೆಗೆಂದು ನವೆಂಬರ್, ಡಿಸೆಂಬರ್ ಮತ್ತು ಜನವರಿ ತಿಂಗಳಲ್ಲಿ ಮೈಸೂರು ಕಾಂಗ್ರೆಸ್ ಅಧ್ಯಕ್ಷರು ಸಂಸ್ಥಾನಾದ್ಯಂತ ಪ್ರವಾಸ ಮಾಡಿ ಜನತೆಯ ಬೆಂಬಲ ಕೋರಿದರು. ಅದರಂತೆ ಎಲ್ಲ ಜಿಲ್ಲಾ ಬೋರ್ಡಿನ ಕಾಂಗ್ರೆಸ್ ಅಧ್ಯಕ್ಷರಿಗೂ ಹಾಗೂ ೧೩೦ ಊರುಗಳಿಗೆ ಭೇಟಿ ಕೊಟ್ಟು ಸಭೆ ನಡೆಸಿ ಚಳವಳಿಗೆ ಪ್ರೋತ್ಸಾಹಿಸಬೇಕೆಂದು ಜನತೆಯನ್ನು ಕೇಳಿಕೊಂಡರು. ಈ ಸಂದರ್ಭದಲ್ಲಿ ಚನ್ನಪಟ್ಟಣ ಹಾಗೂ ಕೋಲಾರದ ಚಿನ್ನದ ಗಣಿ ಪ್ರದೇಶದಲ್ಲಿ ಅನೇಕ ಗಲಭೆಗಳಾದವು.[೩೯] ೧೯೪೭ರ ಮೇ ಒಂದನೇ ತಾರೀಖಿನಿಂದಲೇ ಸತ್ಯಾಗ್ರಹವನ್ನಾಚರಿಸಲು ಸಿದ್ದಗೊಂಡಿದ್ದ ಮೈಸೂರು ಕಾಂಗ್ರೆಸ್, ದಿವಾನರು ದೆಹಲಿಗೆ ಹೋಗಿದ್ದರಿಂದ ಸತ್ಯಾಗ್ರಹ ದಿನವನ್ನು ಬದಲಾಯಿಸಿದರು.

ಆಗಸ್ಟ್ ೨೧ರಿಂದ ೩೦ರವರೆಗೆ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರು ಸಂಸ್ಥಾನಾದ್ಯಂತ ಪ್ರವಾಸ ಮಾಡಿದರು. ಮೊದಲನೆ ತಂಡದಲ್ಲಿ ಕೆ.ಸಿ. ರೆಡ್ಡಿ, ಬಿ.ಸುಬ್ರಮಣ್ಯ, ರಾಜಶೇಖರ್ ಹಿರೇಮಠ್ ಮತ್ತು ಎಂ.ಹುಸೇನ್, ಎರಡನೆಯ ತಂಡದಲ್ಲಿ ಕೆ.ಟಿ.ಭಾಷ್ಯಂ, ಎಚ್.ಸಿದ್ದಯ್ಯ, ಎಂ.ಹುಚ್ಚೇಗೌಡ, ಕೆ.ಆರ್.ಮಾಧವರಾವ್ ಮತ್ತು ಎ.ಜಿ.ರಾಮಚಂದ್ರರಾವ್. ಮೂರನೆ ತಂಡದಲ್ಲಿ ಟಿ.ಸಿದ್ದಲಿಂಗಯ್ಯ, ಎ.ಜಿ.ಬದೀಗೌಡ, ಎಸ್.ಚನ್ನಯ್ಯ, ನಂಜರಾಜೇ ಅರಸ್ ಮತ್ತು ಕೆ.ಎಸ್.ಕುಮಾರನ್ ಇವರುಗಳಿದ್ದರು. ಮೊದಲನೆ ತಂಡ ಕೋಲಾರ, ತುಮಕೂರು, ಚಿತ್ರದುರ್ಗಗಳಲ್ಲೂ, ಎರಡನೆಯ ತಂಡ ಹಾಸನ, ಕಡೂರು, ಚಿಕ್ಕಮಂಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲೂ, ಮೂರನೆಯ ತಂಡ ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳಲ್ಲೂ ಪ್ರವಾಸ ಕೈಗೊಂಡು ಸಂಸ್ಥಾನದ ೯ ಜಿಲ್ಲೆಗಳಲ್ಲೂ ಉತ್ತಮ ಸಂಘಟನೆ ಮಾಡಿದರು.[೪೦] ಕಾಂಗ್ರೆಸ್ಸು ಈ ಚಳವಳಿಗೆ ಸಿದ್ಧವಾದಂತೆ, ಸರ್ಕಾರವು ತನ್ನ ಶಕ್ತಿಯಿಂದ ಸತ್ಯಾಗ್ರಹವನ್ನು ನಿಲ್ಲಿಸಲು ತನ್ನ ಅಧಿಕಾರಿಗಳಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿತು.

ಒಂದು ಕಡೆ ಚಳವಳಿಯ ಸಂಘಟನೆ ಆರಂಭವಾದರೆ, ಇನ್ನೊಂದೆಡೆ ಈ ಸತ್ಯಾಗ್ರಹವನ್ನು ನಿಲ್ಲಿಸಲು, ಸಂಸ್ಥಾನದ ಅನೇಕ ಜನರು ಪ್ರಯತ್ನಿಸಿದರು. ಅಂತವರಲ್ಲಿ ಎಂ.ರಾಮಚಂದ್ರರಾವ್, ಸಿಂಧ್ಯ, ಎನ್.ರುದ್ರಯ್ಯ, ಎಂ.ಕಸ್ತೂರಿ, ಬಿ.ಸಿ.ಆಂಜನಪ್ಪ, ಎ.ಜಿ. ಖಲೀಲ್ ಮುಂತಾದವರು[೪೧] ಕಾಂಗ್ರೆಸ್ಸೇತರ ಸಭೆಗಳನ್ನು ನಡೆಸಿದರು. ಯಾವಾಗ ಚಳವಳಿಯ ಜ್ವಾಲೆ ಸಂಘಟನೆಯ ಮೂಲಕ ಪ್ರಜ್ವಲಿಸುತ್ತಿದ್ದಾಗ ಇವರೆಲ್ಲಾ ಕಾಂಗ್ರೆಸ್ ಜನತೆಯ ಜೊತೆ ಸೇರಲು ಹಾತೊರೆದರು. ಈ ವೇಳೆಗಾಗಲೇ ಕೊಚ್ಚಿನ್, ಸಾಂಗ್ಲಿ ಮುಂತಾದೆಡೆ ಸಂಸ್ಥಾನದ ರಾಜರು ಜವಾಬ್ದಾರಿ ಸರ್ಕಾರ ಘೋಷಣೆ ಮಾಡಿದ್ದರು. ಈ ಮಧ್ಯೆ ಚಳವಳಿಯನ್ನು ನಿಲ್ಲಿಸಲು ದಿವಾನರು ಕೊನೆಯ ಅಸ್ತ್ರವಾಗಿ ಆಗಸ್ಟ್ ೩೧ರಂದು ಮೈಸೂರು ರಾಜಕೀಯ ಸುಧಾರಣೆಗಳ ರೂಪರೇಷಗಳನ್ನೊಳಗೊಂಡ ಸರ್ಕಾರಿ ಪ್ರಕಟಣೆಯೊಂದನ್ನು ಹೊರಡಿಸಿದರು. ಇದರಲ್ಲಿ ಜವಾಬ್ದಾರಿ ಸರ್ಕಾರದ ವಿಷಯವೇ ಇರಲಿಲ್ಲ.

ಮೈಸೂರು ಚಲೋ ಚಳವಳಿಯ ಸಿದ್ಧತೆಯೊಂದಿಗೆ ಸೆಪ್ಟೆಂಬರ್ ೪ರಂದು ಮೈಸೂರಿಗೆ ಹೊರಡಲಿದ್ದ ಕೆ.ಸಿ.ರೆಡ್ಡಿಯವರನ್ನು ಹಾಗೂ ಕಾಂಗ್ರೆಸ್ ನಾಯಕರುಗಳಾದ ಟಿ.ಸುಬ್ರಹ್ಮಣ್ಯ, ಎಂ.ಹುಚ್ಚೇಗೌಡ, ಕೆ.ಸಿ.ಮಾಧವರಾವ್, ಕೆ.ಎನ್.ಕುಮಾರನ್, ಎಚ್.ಕೆ.ವೀರಣ್ಣಗೌಡ, ಎ.ಜಿ.ರಾಮಚಂದ್ರರಾವ್, ಎನ್.ಚನ್ನಯ್ಯ, ಎಚ್.ಸಿದ್ದಯ್ಯ, ಕೆ.ಟಿ.ಭಾಷ್ಯಂ, ಎ.ಜಿ.ಬದೀಗೌಡ ಮುಂತಾದ ಎಲ್ಲ ನಾಯಕರನ್ನು ಪೊಲೀಸರು ಸೆಪ್ಟೆಂಬರ್ ೩ರ ಮಧ್ಯರಾತ್ರಿಯೇ ಬಂಧಿಸಿದರು. ಜೊತೆಗೆ ಜಿಲ್ಲಾ ನ್ಯಾಯಾಧೀಶರು ಪೊಲೀಸ್ ಕಾನೂನಿನ ೩೯ ಮತ್ತು ೪೫ರ ನಿಬಂಧನೆಯಂತೆ ನಿಷೇಧಾಜ್ಞೆಯನ್ನು ಜಾರಿಗೆ ತಂದರು.[೪೨] ಈ ಚಳವಳಿಗೆ ಪೂರ್ಣ ಬೆಂಬಲವಿತ್ತು ಕಮ್ಯುನಿಷ್ಟ್ ಪಕ್ಷ ತಮ್ಮ ಹಿಡಿತದಲ್ಲಿದ್ದ ಎಲ್ಲ ಕಾರ್ಮಿಕ ಸಂಘ ಸಂಸ್ಥೆಗಳ ಪೂರ್ಣ ಬೆಂಬಲವನ್ನು ಈ

ಉದ್ದೇಶಕ್ಕೆ ದೊರಕಿಸಿಕೊಡುವ ಆಶ್ವಾಸನೆಯನ್ನು ಕೊಟ್ಟಿತು. ಅದೇ ರೀತಿ ತಮಿಳುನಾಡಿನ ಕಾಂಗ್ರೆಸ್ ಅಧ್ಯಕ್ಷ ಕೆ.ಕಾಮರಾಜ್ ಮತ್ತು ಬೊಂಬಾಯಿ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಎಸ್.ಕೆ.ಪಾಟೀಲ್ ಬೆಂಬಲವಿತ್ತರು.[೪೩] ಕೇರಳದಿಂದ ಸತ್ಯಾಗ್ರಹಿಗಳ ಜನ ಸಾಗರವೇ ಚಳವಳಿಗೆ ಧುಮಕಿತು. ಮೈಸೂರೇತರ ಕರ್ನಾಟಕದ ಜನರೆಲ್ಲಾ ಪ್ರೋತ್ಸಾಹ ನೀಡಿದರು. ಆಗ ಚಳವಳಿಗೆ ಮತ್ತಷ್ಟು ಬಲ ಬಂದಿತು. ಅಂದು ಎಲ್ಲ ಶಾಲಾ, ಕಾಲೇಜು ವಿದ್ಯಾರ್ಥಿಗಳು ತರಗತಿಗೆ ಹೋಗದೆ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ತುಮಕೂರು, ಗುಬ್ಬಿ, ಕುಣಿಗಲ್, ಮಧುಗಿರಿ ಮತ್ತು ತಿಪಟೂರಿನಲ್ಲಿ ಸಹಾನುಭೂತಿಯಿಂದ ಕೂಡಿದ್ದ ವಿದ್ಯಾರ್ಥಿಗಳು ಮತ್ತು ಮತ್ತಿತರರು ಹೆಂಡದಂಗಡಿಗಳನ್ನು ಮುಚ್ಚಿಸಿ ಸರ್ಕಾರಿ ಕಾರ್ಯಾಲಯಗಳ ಮುಂದೆ ಪಿಕೆಟಿಂಗ್ ಮಾಡಿದರು. ಕೋಲಾರ ಜಿಲ್ಲೆಯ ಮುಳುಬಾಗಿಲು, ಮಾಲೂರುಗಳಲ್ಲಿ ಸಾರ್ವಜನಿಕ ಸಭೆಗಳು ನಡೆದವು. ಸೆಪ್ಟೆಂಬರ್ ೫ರಂದು ಬೆಂಗಳೂರಿನಿಂದ ಬಸವನಗುಡಿ ಪ್ರದೇಶದ ರಸ್ತೆಗಳಲ್ಲಿ ಪ್ರತಿಬಂಧಕಗಳನ್ನು ಹಾಕಿದರು. ಕಂಟೋನ್‌ಮೆಂಟ್ ಕಡೆಯಿಂದಲೂ ಸತ್ಯಾಗ್ರಹಿಗಳ ಜಾಥಗಳು ಮೈಸೂರು ಕಡೆಗೆ ಹೊರಟವು. ಅವುಗಳ ನಾಯಕರುಗಳನ್ನೆಲ್ಲಾ ಪೊಲೀಸರು ಬಂಧಿಸಿದರು.

ಸೆಪ್ಟೆಂಬರ್ ೬ರಂದು ಸುಮಾರು ೩ ಸಾವಿರ ಜನರು ಮಲ್ಲೇಶ್ವರಂ ಪೊಲೀಸ್ ಸ್ಟೇಷನ್‌ಗೆ ಮುತ್ತಿಗೆ ಹಾಕಿದರು. ಪೊಲೀಸರು ಆ ಸಂದರ್ಭದಲ್ಲಿ ಗುಂಡುಹಾರಿಸಿದ್ದರ ಪರಿಣಾಮವಾಗಿ ಇಬ್ಬರು ವ್ಯಕ್ತಿಗಳು ಮಡಿದರು. ಬೆಂಗಳೂರು ನಗರದ ರಸ್ತೆಗಳಲ್ಲಿ ಸತ್ಯಾಗ್ರಹಿಗಳು ಸಂಚಾರಕ್ಕೆ ಅಡ್ಡಿ ಉಂಟುಮಾಡುತ್ತಿದ್ದರು. ಟೆಲಿಫೋನ್ ತಂತಿಗಳನ್ನು ಕತ್ತರಿಸುತ್ತಿದ್ದರು, ರೈಲ್ವೆ ಸೇತುವೆ ನಾಶಗೊಳಿಸುವ ಪ್ರಯತ್ನ ಮಾಡುತ್ತಿದ್ದರು. ಸೆಪ್ಟೆಂಬರ್ ೧೩ರ ವರೆಗೂ ಜಾಥಗಳು ಹೊರಟವು. ಆ ಸಂದರ್ಭದಲ್ಲಿ ಪೊಲೀಸರು ಗುಂಡು ಹಾರಿಸಿದ ಕಾರಣ ಮೂವರು ಸಾವನ್ನಪ್ಪಿ, ೧೩ ಜನ ಗಾಯಗೊಂಡು, ೫ ಜನ ಆಸ್ಪತ್ರೆಯಲ್ಲಿ ಮರಣ ಹೊಂದಿದರು.[೪೪] ಚನ್ನಪಟ್ಟಣ, ಕಾನಕಾನಹಳ್ಳಿ, ಪಾಂಡವಪುರ, ಕೃಷ್ಣರಾಜನಗರ, ತಾಲ್ಲೂಕುಗಳಿಂದ ಮೈಸೂರಿಗೆ ಹೋಗುತ್ತಿದ್ದ ಸತ್ಯಾಗ್ರಹಿಗಳ ಗುಂಪುಗಳನ್ನು ಪೊಲೀಸರು ಚದುರಿಸಿ ನಾಯಕರನ್ನು ಬಂಧಿಸಿದರು. ಸೆಪ್ಟೆಂಬರ್ ೭ರಂದು ರೈಲ್ವೆ ಕೆಲಸಗಾರರೂ ಸಹ ಚಳವಳಿಗೆ ಸೇರಿದರು. ಕೋಲಾರದ ಚಿನ್ನದ ಗಣಿ, ಮಂಡ್ಯದ ಸಕ್ಕರೆ ಕಾರ್ಖಾನೆ ಮತ್ತು ಪಾಂಡವಪುರದಲ್ಲಿ ಗುಂಪೊಂದರ ಮೇಲೆ ಪೊಲೀಸರು ಗುಂಡು ಹಾರಿಸಿದ್ದರಿಂದ ಸ್ಥಳದಲ್ಲೇ ಒಬ್ಬ ವ್ಯಕ್ತಿ ಮೃತಪಟ್ಟನು. ಮೈಸೂರು ನಗರದಲ್ಲಿಯೂ ಅರಮನೆಯ ಕಡೆಗೆ ಮೆರವಣಿಗೆ ಹೋಗುತ್ತಿದ್ದ ಸತ್ಯಾಗ್ರಹಿಗಳ ಗುಂಪನ್ನು ಪೊಲೀಸರು ಲಾಠಿಚಾರ್ಜ್ ಮಾಡಿ ಚದುರಿಸಿದರು. ಕಾಂಗ್ರೆಸ್ ನಾಯಕರ ಬಂಧನದಿಂದ ಮೈಸೂರು ನಗರದಲ್ಲಿ ಸಂದಿಗ್ಧ ಪರಿಸ್ಥಿತಿ ಉಂಟಾಗಿತ್ತು. ೪ನೇ ತಾರೀಖು ಬೆಳಿಗ್ಗೆ ಮಹಾರಾಜ ಕಾಲೇಜ್ ಮುಂದೆ ಜಿಲ್ಲಾ ನ್ಯಾಯಾಧೀಶರ ಆಜ್ಞೆಯ ವಿರುದ್ಧ ಒಂದು ಸಭೆ ನಡೆಯಿತು. ಆಗ ಪೊಲೀಸರು ಆ ಸಭೆಯನ್ನು ಚದುರಿಸಿದರು. ನಂತರ ಅಲ್ಲಿಂದ ಚದುರಿದ ವಿದ್ಯಾರ್ಥಿಗಳು ೧೦೦ ಅಡಿ ರಸ್ತೆಯ (ಈಗ ಚಾಮರಾಜ ರಸ್ತೆ) ೫

ಲೈಟುಗಳ ಸರ್ಕಲ್ ಹತ್ತಿರ ಗುಂಪು ಕೂಡಿದರು. ಆಗ ಅಲ್ಲಿ ಹೋಗುತ್ತಿದ್ದ ಪೊಲೀಸ್ ಪೇದೆಯನ್ನು ಹಾರ್ಡಿವಿಕ್ ಹೈಸ್ಕೂಲಿನ ಹತ್ತಿರ ವಿದ್ಯಾರ್ಥಿಗಳು ರೇಗಿಸಿದರು. ಈ ಸುದ್ದಿ ತಿಳಿದ ತಕ್ಷಣ ಸೈನ್ಯ ಮತ್ತು ಪೊಲೀಸರು ಧಾವಿಸಿದರು. ಆಗ ೫ ಲಾಂದ್ರಗಳ ಸರ್ಕಲ್ ಹತ್ತಿರ ಎಲ್ಲ ರಸ್ತೆಗಳ ಕಡೆಗಳಲ್ಲಿಯೂ ವಿದ್ಯಾರ್ಥಿಗಳು ಗುಂಪು ಕೂಡಿ ಪೊಲೀಸರ ಮೇಲೆ ಕಲ್ಲು ತೂರಲಾರಂಭಿಸಿದರು. ಆಗ ಪೊಲೀಸರ ಗುಂಡಿಗೆ ಹಾರ್ಡಿವಿಕ್ ಹೈಸ್ಕೂಲಿನ ವಿದ್ಯಾರ್ಥಿ ರಾಮಸ್ವಾಮಿ ಬಲಿಯಾದರು.[೪೫] ಈ ಘಟನೆಯ ನೆನಪಿಗಾಗಿ ಆ ಸ್ಥಳಕ್ಕೆ 'ರಾಮಸ್ವಾಮಿ ವೃತ್ತ' ಎಂದು ಹೆಸರಿಡಲಾಯಿತು.

ಸೆಪ್ಟೆಂಬರ್ ೮ರಂದು ಮಹಾರಾಜರು ಜವಾಬ್ದಾರಿ ಸರ್ಕಾರ ದಯಪಾಲಿಸುವ ಘೋಷಣೆ ಮಾಡಿ ಸಂಸ್ಥಾನದ ಪ್ರಜೆಗಳು ಸಹಕರಿಸಬೇಕೆಂದು ಕೋರುವ ಒಂದು ಪ್ರಕಟಣೆ ಹೊರಡಿಸಿದ್ದರು. ಆಗ ಕಾಂಗ್ರೆಸ್ ಅಧ್ಯಕ್ಷ ಕೆ.ಸಿ.ರೆಡ್ಡಿಯವರು "ಭಾರತ ರಾಜ್ಯಾಂಗ ರಚನಾ ಕಾರ್ಯ ಭಾರತ ದೇಶದ ಜನತಾ ಪ್ರತಿನಿಧಿಗಳಿಂದ ರೂಪಗೊಳ್ಳುತ್ತಿರುವಾಗ ಸಂಸ್ಥಾನದ ಹೊರಗಿನವರಾದ ದಿವಾನರು, ಅವರಿಂದ ನೇಮಕವಾದ ಸಲಹಾ ಮಂಡಳಿ ಸಮಿತಿಯ ಸದಸ್ಯರು, ಇವರಿಂದ ರಚಿಸಲ್ಪಟ್ಟ ರಾಜ್ಯಾಂಗ ಎಷ್ಟರ ಮಟ್ಟಿಗೆ ಜನರ ಆಶೋತ್ತರಗಳನ್ನು ಸಾಧಿಸಬಹುದು". ಎಂಬುದನ್ನು ಗಮನಿಸಿ ಮೈಸೂರಿನ ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳಿಂದೊಡಗೂಡಿದ ರಾಜ್ಯಾಂಗ ಸಭೆಯನ್ನು ಏರ್ಪಡಿಸುವವರೆಗೆ ಈ ಸತ್ಯಾಗ್ರಹವನ್ನು ನಿಲ್ಲಿಸಬಾರದೆಂದು, 'ಪೌರವಾಣಿ' ಪತ್ರಿಕೆ ಜನತೆಗೆ ಕರೆಕೊಟ್ಟಿತು.[೪೬]

ಅದೇ ರೀತಿ ಶಿವಮೊಗ್ಗ ಜಿಲ್ಲೆಯಲ್ಲಿಯೂ ಚಳವಳಿಯು ಉಗ್ರರೂಪ ತಳೆಯಿತು. ಗಂಧದ ಮರ ಕಡಿಯುವ ಮೂಲಕ ಜನರು ಹೋರಾಟಕ್ಕೆ ಇಳಿದರು. ಸೆಪ್ಟೆಂಬರ್ ೧೧ ಮತ್ತು ೧೩ರಂದು ಬಳ್ಳಾರಿ ಸಿದ್ದಮ್ಮನವರ ನೇತೃತ್ವದಲ್ಲಿ ಚಿತ್ರದುರ್ಗದಲ್ಲಿ ರಾಷ್ಟ್ರೀಯ ಧ್ವಜ ಹಾರಿಸಲು ಪ್ರಯತ್ನಿಸಿ ಬಂಧಿತರಾದರು.[೪೭] ಕೋಲಾರದಲ್ಲಿ ಸೆಪ್ಟೆಂಬರ್ ೧೦ರಂದು ಪ್ರತಿಮೆಯನ್ನು ಸುಟ್ಟರು. ೧೨ನೆ ತಾರೀಖು ಶಿಡ್ಲಘಟ್ಟದಲ್ಲಿ ಸೇರಿದ ಸಭೆಯನ್ನು ಪೊಲೀಸರು ಚದುರಿಸಿದಾಗ ಒಬ್ಬರು ಮಡಿದು ೩ ಜನರಿಗೆ ಗಾಯಗಳಾದವು. ಎಸ್.ನಿಜಲಿಂಗಪ್ಪನವರನ್ನು ಮಡಿಕೇರಿಯಿಂದ ಮೈಸೂರಿಗೆ ಬರುವ ಮಾರ್ಗಮಧ್ಯದಲ್ಲಿ ೧೩ನೆ ತಾರೀಖು ಪೊಲೀಸರು ಬಂಧಿಸಿದರು. ಪಡುವಾರಹಳ್ಳಿ, ಹುಣಸೂರು, ಕೃಷ್ಣಸಾಗರ, ಟಿ.ನರಸೀಪುರಗಳಿಂದ ಮೈಸೂರಿಗೆ ಧಾವಿಸುತ್ತಿದ್ದ ಸತ್ಯಾಗ್ರಹಿಗಳನ್ನು ಪೊಲೀಸ್ ಅಧಿಕಾರಿಗಳು ಬಂಧಿಸಿದರು. ಬೆಂಗಳೂರು ನಗರದಲ್ಲಿ ೧೪ನೆ ತಾರೀಖು ಕರ್ಫ್ಯೂ ಜಾರಿಗೆ ತಂದರು. ಸುಮಾರು ೧೯೦ ಜನ ಯುವಕರ ಜಾಥದ ನಾಯಕತ್ವವಹಿಸಿಕೊಂಡು, ಮೈಸೂರಿಗೆ ಹೋಗಲು ಅಖಿಲ ಭಾರತದ ವಿದ್ಯಾರ್ಥಿ ಕಾಂಗ್ರೆಸ್ಸಿನ ರವೀಂದ್ರವರ್ಮರವರು ೧೪ ಜನ ವಿದ್ಯಾರ್ಥಿಗಳೊಡನೆ ರೈಲಿನಲ್ಲಿ ಬೆಂಗಳೂರಿಗೆ ಬರುತ್ತಿದ್ದರು. ಅವರನ್ನು ಬೆಂಗಳೂರಿನ ಈಸ್ಟ್ ಸ್ಟೇಷನ್ನಿನ್ನಲ್ಲಿ ಬಂಧಿಸಿದರು. ಹಾಗೂ ತುಮಕೂರಿನಲ್ಲಿ

ಸುಮಾರು ೧೦೦೦೦ ಜನರಿದ್ದ ಗುಂಪಿನ ಮೇಲೆ ೧೪ರಂದು ಅಧಿಕಾರಿಗಳು ಗುಂಡುಹಾರಿಸಿದ ಪ್ರಯುಕ್ತ ಮೂವರು ಸಾವನ್ನಪ್ಪಿದರು. ೮ ಜನ ಗಾಯಗೊಂಡರು. ಚಿತ್ರದುರ್ಗ ಜಿಲ್ಲೆಯಲ್ಲಿ ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ಮತ್ತು ಸರ್ಕಾರಿ ಅಧಿಕಾರಿಗಳ ಮೇಲೆ ಸಾಮೂಹಿಕ ಬಹಿಷ್ಕಾರ ಹಾಕಿ ತೆರಿಗೆ ಕೊಡಲು ನಿರಾಕರಿಸಿದರು. ಚಳವಳಿಯು ಚಿತ್ರದುರ್ಗ, ದಾವಣಗೆರೆ, ಹರಿಹರಗಳಲ್ಲಿ ಜೋರಾಗಿಯೇ ನಡೆಯಿತು. ಹೊಸದುರ್ಗ ತಾಲ್ಲೂಕು ಕಛೇರಿಗಳ ಮುಂದೆ ಸುಮಾರು ೪ ಸಾವಿರ ಜನ ಸೇರಿ ರಾಷ್ಟ್ರಧ್ವಜ ಹಾರಿಸಲು ಪ್ರಯತ್ನಿಸಿದರು. ಗುಂಪನ್ನು ಚದುರಿಸಲು ಪೊಲೀಸರು ಗುಂಡುಹಾರಿಸಿದರ ಪರಿಣಾಮವಾಗಿ ೪ ಜನ ಸ್ಥಳದಲ್ಲೇ ಮಡಿದರು ಹಾಗೂ ೨ ಜನ ಗಾಯಗೊಂಡರು. ಸತ್ಯಾಗ್ರಹದ ಸಂದರ್ಭದಲ್ಲಿ ಸರ್ಕಾರ ಪತ್ರಿಕೆಗಳ ಮೇಲೆ ನಿರ್ಬಂಧಕಾಜ್ಞೆಯನ್ನು ಹಾಕಿದ್ದರ ಪರಿಣಾಮವಾಗಿ ಸಂಸ್ಥಾನದ ಗಡಿ ಪ್ರದೇಶದಲ್ಲಿ ಎಚ್.ಎಸ್.ದೊರೆಸ್ವಾಮಿ, ರುಮಾಲೆ ಚನ್ನಬಸವಯ್ಯ, ಮುಂತಾದವರು ಕೆಲವರ ಸಹಾಯ ಪಡೆದು ಸತ್ಯಾಗ್ರಹ ವಿಷಯಗಳನ್ನು 'ಪೌರವಾಣಿ'[೪೮] ಎಂಬ ಪತ್ರಿಕೆಯಲ್ಲಿ ಪ್ರಕಟಿಸಿ ಜನರಿಗೆ ತಲುಪಿಸುತ್ತಿದ್ದರು. ಮದ್ರಾಸಿನಲ್ಲಿ ಎಸ್.ಎನ್. ಗುಪ್ತರವರು ಒಂದು ಶಿಬಿರವನ್ನು ಏರ್ಪಡಿಸಿ ನಾಯಕರಿಗೆ ಪ್ರಮುಖ ವಿಷಯಗಳನ್ನು ತಿಳಿಸುತ್ತಿದ್ದರು. ಆರ್.ಎನ್. ಆರಾಧ್ಯರವರು ಹುಬ್ಬಳ್ಳಿಯಿಂದ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ಸಿನ ಸಹಕಾರದಿಂದ ಸಂಸ್ಥಾನದ ಗಡಿ ಪ್ರದೇಶಗಳಲ್ಲಿ ಚಳವಳಿಯನ್ನು ನಿಯೋಜಿಸುತ್ತಿದ್ದರು. ಚಿಕ್ಕನಾಯಕನಹಳ್ಳಿಯಲ್ಲಿ ಸುಮಾರು ೧೪ ದಿನಗಳ ಪರ್ಯಂತ ತಾಲ್ಲೂಕು ಕಛೇರಿಯ ಮುಂದೆ ಧ್ವಜಾರೋಹಣ ಮಾಡಿ ಸತ್ಯಾಗ್ರಹಿಗಳು ಪ್ರತಿದಿನ ಜೈಲು ಸೇರುತ್ತಿದ್ದರು.[೪೯] ಈ ಸಂಧರ್ಭದಲ್ಲಿ ಅನೇಕ ಪತ್ರಿಕೆಗಳೂ ಸಹ ಚಳವಳಿಯು ಹರಡಲು ಸಹಕಾರಿಯಾಗಿವೆ ಅದರಲ್ಲೂ ಭೂಗತ ಪತ್ರಿಕೆಗಳಾದ 'ಇನ್‌ಕಿಲಾಬ್' 'ಜ್ಯೋತಿ' 'ಆಹುತಿ' 'ಅಗ್ನಿ' 'ಆಜಾದ್' 'ಫಯರ್' 'ಲಿಬರ್ಟಿ' ಮುಂತಾದ ಪತ್ರಿಕೆಗಳೂ ಹಾಗೂ ಸಾಧ್ವಿ, ಪೌರವಾಣಿ ಇತ್ಯಾದಿ ಪತ್ರಿಕೆಗಳ ಪಾತ್ರ ಮಹತ್ವದ್ದಾಗಿದೆ.[೫೦]

ಮೈಸೂರು ಚಲೋ ಚಳವಳಿಯಲ್ಲಿ ಪುರುಷರಷ್ಟೆ, ಮಹಿಳೆಯರು ಸಹ ಪಾಲ್ಗೊಂಡು ಹೋರಾಡಿದರು. ಸೆಪ್ಟೆಂಬರ್ ಕೊನೆಯ ವಾರದಲ್ಲಿ ಬೆಂಗಳೂರಿನ ನ್ಯೂ ಪಬ್ಲಿಕ್ ಕಛೇರಿಗಳಲ್ಲಿ ಹಾಗೂ ಕೋರ್ಟುಗಳ ಮುಂದೆ ಶಾಂತಿಯುತವಾಗಿ ವಿದ್ಯಾರ್ಥಿನಿಯರ ಗುಂಪುಗಳು ಪಿಕೆಟಿಂಗ್ ಮಾಡಿದರು. ಈ ಚಳವಳಿಯಿಂದ ಪ್ರಭಾವಿತರಾದ ಯಶೋಧರ ದಾಸಪ್ಪ, ಸುಬ್ಬಮ್ಮ ಜೋಯಿಸ್, ಬಳ್ಳಾರಿ ಸಿದ್ದಮ್ಮ, ಸುಶೀಲಮ್ಮ, ತಾಯಮ್ಮ ಇತ್ಯಾದಿ ಮಹಿಳೆಯರು ನ್ಯಾಯಾಲಯದ ಮುಂದೆ ವಕೀಲರು ತಮ್ಮ ಕೆಲಸವನ್ನು ನಿಲ್ಲಿಸಬೇಕೆಂದು ತಿಳಿಸಿದರು. ಇದೇ ರೀತಿ ನಾಗರತ್ನಮ್ಮ ಹಿರೇಮಠ್, ಡಿ.ಜಯಮ್ಮ, ಎನ್.ಎಸ್.ಗೌರಮ್ಮ, ಭಾನುಮತಿ ವೀರಪ್ಪ, ಟಿ. ಸುನಂದಮ್ಮ ಮುಂತಾದವರು[೫೧] ಈ ಚಳವಳಿಯಲ್ಲಿ ಭಾಗವಹಿಸಿದರು. ಅದೇ ರೀತಿ ಸರ್ಕಾರದ ದಬ್ಬಾಳಿಕೆಯನ್ನು ಸಹಿಸದ ಗಾಂಧೀಜಿಯವರ ತತ್ವಗಳನ್ನು ಅನುಸರಿಸುವ ಅನೇಕ ರೈತರೂ[೫೨] ಸಹ ಈ ಚಳವಳಿಯಲ್ಲಿ ಭಾಗವಹಿಸುವಂತೆ ರಾಜಪ್ರಭುತ್ವದ ಕೆಲಸ ಕಾರ್ಯಗಳು

ಪ್ರೇರೇಪಿಸಿದವು. ಗ್ರಾಮೀಣ ಪ್ರದೇಶದ ಬೆನ್ನೆಲುಬಾಗಿದ್ದ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ, ಮೈಸೂರು ಸಂಸ್ಥಾನದ ಸರ್ಕಾರ ಜನರ ಬೇಡಿಕೆಗಳಿಗೆ ಸೋಲುವಂತಾಗಲು ಕಾರಣಕರ್ತರಾದರು. ಹಾಗೂ ಕಾರ್ಮಿಕರು ಸಹ ಈ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದರು. ರಾಷ್ಟ್ರೀಯವಾದಿ ಸಂಘಟನೆಗೆ ಅಧೀನವಾಗಿದ್ದ ಕೈಗಾರಿಕೆಗಳು, ಹೋಟೆಲುಗಳು ಹಾಗೂ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್ ಕಾರ್ಖಾನೆಯ ಕಾರ್ಮಿಕರುಗಳು, ಕಾಂಗ್ರೆಸ್, ಸಮಾಜವಾದಿ ಹಾಗೂ ಕಮ್ಯುನಿಷ್ಟ್ ಪಕ್ಷಗಳ ಪ್ರಭಾವದಿಂದ ಅನೇಕ ಕಾರ್ಮಿಕ ನಾಯಕರು ರಾಜ್ಯಾದ್ಯಾಂತ ಕಾರ್ಮಿಕರನ್ನು ಸಂಘಟಿಸಿದರು. ಚಿನ್ನದ ಗಣಿ ಕೆಲಸಗಾರರು ಸೆಪ್ಟೆಂಬರ್ ೨೨ರಂದು ಮಧ್ಯಾಹ್ನ ಕೆ.ಜಿ.ಎಫ್‌ಗೆ ೭ ಮೈಲಿ ದೂರದಲ್ಲಿರುವ ಚಿತ್ತೂರು ಜಿಲ್ಲೆಯ ಬೂದುಗೂರು ಎಂಬಲ್ಲಿ ಕಮ್ಯುನಿಷ್ಟ್ ನಾಯಕ ಪಿ. ಎನ್. ಗೋವಿಂದನ್ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ, ಈಗಿನ ದಬ್ಬಾಳಿಕೆ ಸರ್ಕಾರ ನಿರ್ಮೂಲನವಾಗಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗುವವರೆಗೆ ಗಣಿ ಕೆಲಸಗಾರರು ಮುಷ್ಕರ ಮುಂದುವರೆಸಬೇಕೆಂದು ನಿರ್ಣಯ ಮಾಡಿದರು.[೫೩] ಗ್ರಾಮೀಣ ಜನರು ಎಲ್ಲೆಡೆ ಪ್ರತಿ ಸರ್ಕಾರ ಅಥವಾ ಸಮಾನಾಂತರ ಸರ್ಕಾರಗಳನ್ನು ಸ್ಥಾಪಿಸಿದ ಪರಿಣಾಮವಾಗಿ ಸರ್ಕಾರ ತನ್ನ ನಿಯಂತ್ರಣ ಕಳೆದುಕೊಂಡಿತು. ಜನರ ಐಕ್ಯತೆಯನ್ನು ಮುರಿಯಲು ದಿವಾನರು ಎಲ್ಲ ಕಸರತ್ತುಗಳನ್ನು ಮಾಡಿದರು. ದಿವಾನರ ಈ ನೀತಿಯಿಂದ ಸರ್ಕಾರಕ್ಕೆ ಹತ್ತಿರವಾಗಿದ್ದವರೂ ಸಹ ದೂರ ಹೋಗಲು ಸಿದ್ದರಾದರು.

ಈ ರೀತಿಯಲ್ಲಿ ಮೈಸೂರು ಚಲೋ ಹಾಗೂ ಅರಮನೆ ಮುಂದೆ ಸತ್ಯಾಗ್ರಹದಲ್ಲಿ ಭಾಗವಹಿಸಲು ಸಂಸ್ಥಾನದ ವಿವಿಧ ಭಾಗಗಳಿಂದ ಜನರು ಗುಂಪು ಗುಂಪಾಗಿ ಮೈಸೂರಿಗೆ ಆಗಮಿಸಿದರು. ಕೊಯಮತ್ತೂರಿನಿಂದಲೂ ಸತ್ಯಾಗ್ರಹಿಗಳು ಬರಲಾರಂಭಿಸಿದರು. ಅದೇ ರೀತಿ ಆಗ ಸ್ಥಾಪಿತವಾಗಿದ್ದ 'ಸ್ವತಂತ್ರ್ಯ ಮೈಸೂರು ರೇಡಿಯೊ'[೫೪] ಜನರು ಚಳವಳಿಯನ್ನು ನಿಲ್ಲಿಸದೇ ಮುಂದುವರೆಸಬೇಕೆಂದು ಪ್ರಚಾರ ಮಾಡುತಿತ್ತು. ಸತ್ಯಾಗ್ರಹಿಗಳೆಲ್ಲರೂ ಅರಮನೆ ಮುಂದೆ ಹೋದಾಗ ಅರಮನೆಯು ಮಿಲಿಟರಿ ಹಾಗೂ ಪೊಲೀಸರಿಂದ ಸುತ್ತುವರಿಯಲ್ಪಟ್ಟರು. ಸಂಸ್ಥಾನದಲ್ಲಿನ ಸತ್ಯಾಗ್ರಹಿಗಳನ್ನು ಹಾಗೂ ನೆರೆಯ ಪ್ರದೇಶಗಳಲ್ಲಿನ ಸತ್ಯಾಗ್ರಹಿಗಳನ್ನು ಅರಮನೆ ಮುಂದೆ ಬಂಧಿಸಲಾಯಿತು. ಅಂದಿನ ಪರಿಸ್ಥಿತಿ ಬಗ್ಗೆ ಇಂಡಿಯನ್ ಎಕ್ಸ್‌ಪ್ರೆಸ್ ವರದಿಯಂತೆ "ರಾಜ್ಯದಲ್ಲೆಲ್ಲಾ ಗೆರಿಲ್ಲಾ ಕದನ ನಡೆಯುತ್ತಿತ್ತು", ಮತ್ತೊಂದು ವರದಿಯ ಶಿರೋನಾಮೆ ಹೀಗಿತ್ತು, "ಮೈಸೂರು ರಾಜ್ಯದಲ್ಲಿ ಇನ್ನಷ್ಟು ಜೈಲುಗಳು ಅಗತ್ಯವಿದೆ", ಕಾರಣ ಸತ್ಯಾಗ್ರಹಿಗಳು ಪ್ರವಾಹದಂತೆ ಚಳವಳಿಯಲ್ಲಿ ಭಾಗವಹಿಸುತ್ತಿದ್ದರು.[೫೫] ಒಂದು ಸಂತೋಷದ ಹಾಗೂ ಆಶ್ಚರ್ಯದ ಸಂಗತಿಯೆಂದರೆ ಮೈಸೂರು ಪೊಲೀಸರು ಸಹ ಕೊನೆಗೆ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಹೀಗೆ ಮೈಸೂರು ಚಲೋ ಚಳವಳಿ ಬಹಳ ಬಿರುಸಿನಿಂದ ನಡೆಯುತ್ತಿತ್ತು. ಈ ಚಳವಳಿಯ ಅತ್ಯಂತ ಜನಪ್ರಿಯ ಪ್ರಾಸಬದ್ದ ಘೋಷಣೆಗಳೆಂದರೆ, "ಆರ್ಕ್‌ಟ್ ಬಾಯ್ಕಟ್" ಮತ್ತು "ತಂಬೂಚೆಟ್ಟಿ ಚಟ್ಪಕಟ್ಟಿ"[೫೬] ಎಂಬುದು. ಸತ್ಯಾಗ್ರಹದ ಬಿಸಿ ಹೆಚ್ಚಾಗುತ್ತಿದ್ದಂತೆ ದಿವಾನರು

ಹೊಸ ಅಸ್ತ್ರವನ್ನು ಪ್ರಯೋಗಿಸಿದರು. ಬ್ರಿಟಿಷರ ಒಡೆದು ಆಳುವ ನೀತಿಯನ್ನು ಅನುಸರಿಸಿ ಒಂದು ಕೋಮಿನ ಜನ ಸತ್ಯಾಗ್ರಹವನ್ನು ನಿಂದಿಸಿ ಮಹಾರಾಜರ ಆಡಳಿತಕ್ಕೆ ಬೆಂಬಲಿವಿತ್ತರು. ಈ ನೀತಿಯು ಬಹು ಬೇಗ ದಮನವಾಯಿತು.

ಒಂದೇ ಭಾಷೆ, ಒಂದೇ ಸಂಸ್ಕೃತಿ ಇವುಗಳ ಭಾಂದವ್ಯವಿದ್ದುದರಿಂದ ಬ್ರಿಟಿಷ್ ಕರ್ನಾಟಕದಲ್ಲಿನ ಕನ್ನಡ ಜನತೆಯು ಮೈಸೂರಿನಲ್ಲಿನ ಕನ್ನಡ ಜನತೆಯ ಸಹಾಯಕ್ಕಾಗಿ ಸ್ವಯಂ ಪ್ರೇರಣೆಯಿಂದ ಮೈಸೂರಿಗೆ ಬರತೊಡಗಿದರು. ಸೆಪ್ಟೆಂಬರ್ ೨೪ರಂದು ಮಹಾರಾಜರು "ಮಂತ್ರಿಮಂಡಲವೊಂದು ಶಾಸಕಾಂಗಕ್ಕೆ ಜವಾಬ್ದಾರಿಯಿಂದ ಕೂಡಿದ್ದು, ಜವಾಬ್ದಾರಿ ಸರ್ಕಾರದ ರೂಪ ಪಡೆಯುತ್ತದೆ" ಎಂದು ತಿಳಿಸಿ, "ಬದಲಾವಣೆಗಳೆಲ್ಲವೂ ೧೯೪೮ರ ಜುಲೈ ೧ರಿಂದ ಜಾರಿಗೆ ಬರುತ್ತದೆಯೆಂದು" ತಿಳಿಸಿದರು.[೫೭] ಇದಕ್ಕೆ ಪ್ರತಿಕ್ರಿಯಿಸಿದ ಮದ್ರಾಸಿನ ದಿ ಹಿಂದೂ ಪತ್ರಿಕೆ "ಪ್ರಗತಿಯ ಕೆಲವು ಲಕ್ಷಣಗಳನ್ನು ಹೊಂದಿದ್ದರೂ ಕೂಡ, ಸೂಚಿತ ರಾಜ್ಯಾಂಗ ಪದ್ಧತಿಯು ಆಧುನಿಕ ಭಾವನೆಯಲ್ಲಿ ಜವಾಬ್ದಾರಿ ಸರ್ಕಾರ ಕೊಡುತ್ತದೆಂದು ಹೇಳಲಾಗುವುದಿಲ್ಲ" ಎಂದು ಪ್ರಕಟಿಸಿತು. ಹಾಗೂ ಮಹಾರಾಜರ ಘೋಷಣೆಯನ್ನು ಹಿಂದುಪುರದಲ್ಲಿನ ಮೈಸೂರು ಸತ್ಯಾಗ್ರಹ ಸಮಿತಿಯು ಆಕ್ಷೇಪಿಸಿತು. ಅಕ್ಟೋಬರ್ ೨ರಂದು ಸರ್ಕಾರ ಒಂದು ಆಜ್ಞೆ ಹೊರಡಿಸಿ ಮೈಸೂರು ಧ್ವಜದ ಜೊತೆಯಲ್ಲಿಯೇ ರಾಷ್ಟ್ರೀಯ ಧ್ವಜವನ್ನು ಹಾರಿಸಬೇಕೆಂದು ತಿಳಿಸಿದರು.[೫೮]

ಶಿವಪುರ ಧ್ವಜ ಸತ್ಯಾಗ್ರಹ, ವಿಧುರಾಶ್ವತ್ಥ ದುರಂತ, ಹಾಗೂ ಕ್ವಿಟ್ ಇಂಡಿಯಾ ಚಳವಳಿಗಳು ಮೈಸೂರು ಸಂಸ್ಥಾನದ ಜನತೆಗೆ ಸ್ಫೂರ್ತಿಯಾಗಿ, ಮೈಸೂರು ಚಲೋ ಚಳವಳಿಯಲ್ಲಿ ಪ್ರಬಲವಾಗಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗುವವರೆಗೂ ಹೋರಾಡಿದರು.

ಈ ಚಳವಳಿಯ ಆರಂಭಕ್ಕೆ ಕಾರಣವಾದ ಮೈಸೂರು ಕಾಂಗ್ರೆಸ್ಸಿಗೆ ಸಂಸ್ಥಾನದಲ್ಲೆಲ್ಲಾ ಉತ್ತಮ ಪ್ರತಿಕ್ರಿಯೆ ದೊರೆತು, ವಿದ್ಯಾರ್ಥಿಗಳು, ರೈತರು, ಕಾರ್ಮಿಕರು, ಮಹಿಳೆಯರು, ಸಂಸ್ಥಾನದ ಕಮ್ಯುನಿಷ್ಟ್ ಪಕ್ಷ ಹಾಗೂ ನೆರೆಯ ರಾಜ್ಯದವರು ಒಟ್ಟಾಗಿ ವಸಾಹತು ಶಾಹಿಯಿಂದ ಬೇಸತ್ತ ಹಾಗೂ ಮಹಾರಾಜರ ಆಡಳಿತವನ್ನು ಟೀಕಿಸುವ ಎಲ್ಲ ಜನರು ಸೇರಿ, ಚಳವಳಿಯು ಅಡವಿಯಲ್ಲಿನ ಅಗ್ನಿಯಂತೆ ಮಹಾ ಭೀಕರ ರೂಪ ತಾಳುವುದಕ್ಕೆ, ಚಳವಳಿಯ ಯಶಸ್ಸಿಗೆ ಕಾರಣರಾದರು. ಕೊನೆಗೆ ಜನಾಂದೋಲನದ ಮುಂದೆ ಸರ್ಕಾರ ಅನ್ಯಮಾರ್ಗವಿಲ್ಲದೇ ಶರಣಾಗಿ ಈ ಚಳವಳಿಯಿಂದ ಮೈಸೂರು ಸಂಸ್ಥಾನದ ಜನತೆಗೆ ಜವಾಬ್ದಾರಿ ಸರ್ಕಾರದ ಜೊತೆಗೆ ಪೂರ್ಣ ಸ್ವಾತಂತ್ರ್ಯ ಲಭಿಸಿತು.

ಹಿಂದೂಪುರದಿಂದ ಮೈಸೂರು ಸತ್ಯಾಗ್ರಹ ಶಿಬಿರದ ಪದಾಧಿಕಾರಿಗಳು, ಸತ್ಯಾಗ್ರಹಿಗಳು ಸೇರಿ "ಆಜಾದ್ ಮೈಸೂರು ಸರ್ಕಾರ"[೫೯] ಸ್ಥಾಪನೆ ಮಾಡಿ ಒಂದು ತಾತ್ಕಾಲಿಕ

ಮಂತ್ರಿಮಂಡಲವನ್ನು ರಚಿಸಿ ಮೈಸೂರಿನ ಜನತೆಯ ಪರವಾಗಿ ಒಂದು ಘೋಷಣಾ ಪತ್ರವನ್ನು 'ಪೌರವಾಣಿ' ಎಂಬ ಪತ್ರಿಕೆಯಲ್ಲಿ ಹೊರಡಿಸಿದರು. ಆ ಪ್ರಸಿದ್ಧ ಘೋಷಣೆ ಈ ರೀತಿ ಇದೆ.

ಮೈಸೂರಿನ ಪ್ರಜಾ ಘೋಷಣೆ

'ಆಜಾದ್ ಮೈಸೂರು ಸರ್ಕಾರ ಸ್ಥಾಪನೆ'

ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್‌ರವರು ಅವರ ಮಂತ್ರಿಮಂಡಲವು ದೇಶದ ಪ್ರಜೆಗಳನ್ನು ಹಿಂಸಿಸಿ ಸುಲಿಗೆ ಮಾಡುತ್ತಿರುವುದಿರಂದಲೂ, ಜನರ ಸಂಸ್ಥೆಯಾದ ಕಾಂಗ್ರೆಸ್ಸಿನ ಬೇಡಿಕೆಗಳನ್ನು ನಿರಾಕರಿಸಿ ಮಾನವನ ಆಜನ್ಮಸಿದ್ದ ಹಕ್ಕುಗಳಾದ ವಾಕ್ ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ, ಸಭಾ ಸ್ವಾತಂತ್ರ್ಯಾಪಹರಣಾ ನೀತಿ ಕೈಗೊಂಡಿರುವುದರಿಂದಲೂ, ರಾಜರಿಂದ ನೇಮಿಸಲ್ಪಟ್ಟವರೆಂಬ ನೆವದಿಂದ ಪ್ರಜೆಗಳಿಗೆ ತಾವು ಹೊಣೆಗಾರರಲ್ಲವೆಂದು ಸಾರಿ ಪ್ರಜಾಭೀಷ್ಟವನ್ನು ತಿರಸ್ಕರಿಸಿ ನಡೆಯುತ್ತಿರುವುದರಿಂದಲೂ, ಲಂಚಕೋರತನ, ಕಾಳಸಂತೆ ವ್ಯಾಪಾರಿಗಳಿಗೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಪ್ರೋತ್ಸಾಹಿಸುತ್ತಿರುವುದರಿಂದಲೂ ಕೋಮುವಾರು ಸಾಂಕ್ರಾಮಿಕವನ್ನು ಉದ್ದೇಶಪೂರ್ವಕವಾಗಿ ಹರಡಿ ಜನರಲ್ಲಿ ಪಕ್ಷ ಪಂಗಡಗಳನ್ನು ಹತ್ತಿಕ್ಕುತ್ತಿರುವುದರಿಂದಲೂ, ಈಚಿನ ಯುದ್ಧ ನಂತರ ಒದಗಿರುವ ಆರ್ಥಿಕ ದುಸ್ಥಿತಿಯನ್ನು ತಡೆಗಟ್ಟಲು ಸುತಾರಾಂ ಅಶಕ್ತವಾಗಿರುವುದರಿಂದಲೂ,

ಪದೇ ಪದೇ ಪ್ರಜಾಪ್ರತಿನಿಧಿ ಸಭೆಯಲ್ಲಿ ಮಂಡಿಸಲ್ಪಟ್ಟ ಮಸೂದೆಗಳನ್ನು ಪರಾಭವಗೊಳಿಸಲಾಗಿದ್ದರೂ, ಮಂತ್ರಿವರ್ಗದಲ್ಲಿ ಸಲಹೆ ಇಲ್ಲವೆಂದು, ಪ್ರಜಾ ಪ್ರತಿನಿಧಿಗಳು ಈ ಮೂಲಕ ಸಾರಿದ್ದರೂ ಅಧಿಕಾರ ಲಾಲಸೆಯಿಂದ ಅವರುಗಳು ತಮ್ಮ ಸ್ಥಾನಗಳಿಗಂಟಿಕೊಂಡಿರುವುದರಿಂದಲೂ,

ಉನ್ನತಾಧಿಕಾರಿಗಳ ದಕ್ಷಹೀನತೆಯ ಪರಿಣಾಮವಾಗಿ ಅವರ ಕೈಕೆಳಗಿನ ನೌಕರರು ಉದ್ಧಟರು, ಆಲಸರೂ, ಆಗಿದ್ದು ಒಟ್ಟಿನಲ್ಲಿ ಮೈಸೂರಿನ ಆಡಳಿತ ಯಂತ್ರ ಕುಸಿದು ಬಿದ್ದಿರುವುದರಿಂದಲೂ,

ಈ ಬೇಜವಾಬ್ದಾರಿ ಅಸಮರ್ಥ ಸರ್ಕಾರವನ್ನು ರದ್ದುಗೊಳಿಸಿ, ೧೫-೦೯-೧೯೪೭ರಲ್ಲಿ ಈ ಕೆಳಕಂಡ ಮಂತ್ರಿಮಂಡಲವನ್ನೊಳಗೊಂಡ ಆಜಾದ್ ಮೈಸೂರು ಸರ್ಕಾರವನ್ನು ರಚಿಸಿರುವುದಾಗಿ ಮೈಸೂರಿನ ಪ್ರಜಾವರ್ಗವು ಈ ಮೂಲಕ ಘೋಷಿಸುತ್ತದೆ.[೬೦]

**ಮಂತ್ರಿಮಂಡಲ**

| | |
|---|---|
| ಕೆ. ಚಂಗಲರಾಯ ರೆಡ್ಡಿ | (ಮುಖ್ಯಮಂತ್ರಿ, ಭಾರತದ ಡೊಮಿನಿಯನ್ ಸಂಬಂಧ ನ್ಯಾಯಾಂಗ) |
| ಕೆ.ಟಿ.ಭಾಷ್ಯಂ | (ಹಣಕಾಸು, ಕಾರ್ಮಿಕರು) |
| ಹೆಚ್.ಸಿದ್ದಯ್ಯ | (ರೆವಿನ್ಯೂ) |
| ಕೆ.ಹನುಮಂತಯ್ಯ | (ಒಳಾಡಳಿತ, ಸೈನ್ಯ, ಪೊಲೀಸ್ ದಳ) |
| ಕೆ.ಪಟ್ಟಾಭಿರಾಮನ್ | (ಆಹಾರ) |
| ಟಿ.ಸಿದ್ದಲಿಂಗಯ್ಯ | (ಶಿಕ್ಷಣ) |
| ಯಶೋಧರ ದಾಸಪ್ಪ | (ಆರೋಗ್ಯ, ಗ್ರಾಮಾಭ್ಯುದಯ) |
| ಟಿ.ಮರಿಯಪ್ಪ | (ಕೈಗಾರಿಕೆ, ಅಬ್ಕಾರಿ, ಪಾನ ನಿರೋಧ) |
| ಆರ್.ಚನ್ನಿಗರಾಮಯ್ಯ | (ವ್ಯವಸಾಯ, ರೇಷ್ಮೆ) |
| ಎಂ.ಎಲ್.ನಂಜರಾಜೇ ಅರಸ್ | (ಪಬ್ಲಿಕ್ ವರ್ಕ್ಸ್, ರೈಲ್ವೆ) |
| ಎ.ಝುಡ್.ಷರೀಫ್ | (ಸ್ಥಳೀಯ ಸಂಸ್ಥೆಗಳ ಸಮಾಚಾರ ಖಾತೆ) |

ಈ ಎಲ್ಲ ಸಮಾನತೆಯ ಧ್ಯೇಯವನ್ನೇ ಗುರಿಯಾಗಿಟ್ಟುಕೊಂಡು ಪ್ರಜೆಗಳ ಶಾಂತಿ, ಕ್ಷೇಮಪಾಲನೆಗಾಗಿ ಈ ಸರಕಾರ ಅಹರ್ನಿಶಿ ದುಡಿಯತಕ್ಕದ್ದು.

**ಈ ಸರ್ಕಾರ ತಕ್ಷಣ ನಿರ್ವಹಿಸಬೇಕಾಗಿದ್ದ ಗುರುತರ ಜವಾಬ್ದಾರಿಗಳು:**

೧. ರಾಜ್ಯಾಂಗವನ್ನು ರಚಿಸಲು ಚುನಾಯಿತರಿಂದ ಕೂಡಿದ ರಾಜ್ಯಾಂಗ ಸಭೆಯನ್ನೇರ್ಪಡಿಸುವುದು.

೨. ಹದಗೆಟ್ಟ ಆಹಾರ, ಬಟ್ಟೆ, ವಸತಿ, ಪರಿಸ್ಥಿತಿಯನ್ನು ತಹಬದಿಗೆ ತರುವುದು.

೩. ಸ್ವಾತಂತ್ರ್ಯಾಪಹರಣ ನೀತಿಯನ್ನೆತ್ತಿ ಹಿಡಿದು ಸಾರುವ ಎಲ್ಲ ಪ್ರತಿಬಂಧಕಾಜ್ಞೆಯನ್ನು ತೊಡೆದುಹಾಕುವುದು.

೪. ರೈತರ, ಕಾರ್ಮಿಕರ, ವಿದ್ಯಾರ್ಥಿಗಳ ಸಮಸ್ಯೆಗಳನ್ನು ಬೇಗನೆ ನಿವಾರಿಸುವುದು.

೫. ಸರ್ಕಾರದ ಕೆಳದರ್ಜೆ ನೌಕರರ ಸಂಬಳ ಸಾರಿಗೆಗಳನ್ನು ಅಖಿಲ ಕರ್ನಾಟಕ ಪೇ ಕಮಿಷನ್‌ರವರ ತೀರ್ಮಾನಕ್ಕನುಗುಣವಾಗಿ ಏರಿಸಿ ಮೇಲಾಧಿಕಾರಿಗಳ ಸಂಬಳವನ್ನು ತಗ್ಗಿಸುವುದು.

೬. ಲಂಚಕೋರರು, ಅಸಮರ್ಥರು ಆದ ಅಧಿಕಾರಿಗಳನ್ನು ದಯಾದಾಕ್ಷಿಣ್ಯಗಳಿಲ್ಲದೆ ಹೊರದೂಡುವುದು.

೭. ಸತ್ಯಾಗ್ರಹ ಹೋರಾಟಗಳಲ್ಲಿ ದಮನ ನೀತಿಯನ್ನು ಅನುಸರಿಸಿ ದೌರ್ಜನ್ಯವೆಸಗಿದ ಅಧಿಕಾರಿಗಳನ್ನು ವಿಚಾರಣೆಗೆ ಗುರಿಪಡಿಸಿ ಉಗ್ರ ಶಿಕ್ಷೆಗೊಳಪಡಿಸುವುದು.

ಈ ಮಂತ್ರಿಗಳು ತಮ್ಮ ಪೂರ್ಣ ಕಾಲವನ್ನು ಪ್ರಜಾ ಸೇವೆಯಲ್ಲಿಯೇ ಕಳೆಯಲೆಂಬ ಉದ್ದೇಶದಿಂದ ಅವರಿಗೆ ತಿಂಗಳಿಗೆ ೧೦೦೦ ರೂಗಳ, ಗೌರವ ವೇತನವನ್ನು, ವಾಸಕ್ಕಾಗಿ ಒಂದೊಂದು ಸರ್ಕಾರಿ ಭವನವನ್ನು, ಒಂದೊಂದು ಕಾರನ್ನು ಕೊಡಲಾಗುವುದು.

ಪ್ರತಿ ಗ್ರಾಮ, ತಾಲ್ಲೂಕು ಮತ್ತು ಜಿಲ್ಲೆಯ ಪ್ರಜಾಮುಖಂಡರು ತಾವು ಹಿಂದಿನ ಸರ್ಕಾರದ ಸಂಬಂಧವನ್ನು ತ್ಯಜಿಸಿರುವುದಾಗಿ ಘೋಷಿಸಿ ಆಯಾ ಪ್ರದೇಶದ ಪ್ರಜೆಗಳ ಸ್ವಹಸ್ತ ಸಹಿಗಳಿಂದೊಡಗೂಡಿದ ಪತ್ರಗಳನ್ನು 'ಆಜಾದ್' ಮೈಸೂರು ಸರ್ಕಾರಕ್ಕೆ ಒಡನೆ ಕಳುಹಿಸತಕ್ಕದ್ದು ಜೈ ಹಿಂದ್.

ಇದಲ್ಲದೇ ಎಲ್ಲ ಗ್ರಾಮಗಳಲ್ಲೂ ಸತ್ಯಾಗ್ರಹಿಗಳನ್ನು ಸಂಘಟಿಸುವ ಕೆಲಸವನ್ನು ಆಜಾದ್ ಫೌಜ್ ನೆರವೇರಿಸುತ್ತಿತ್ತು. ಹೀಗೆ ಸತ್ಯಾಗ್ರಹಕ್ಕೆ ದಾಖಲಾಗುವವರು ಈ ಕೆಳಕಂಡ ಪ್ರತಿಜ್ಞಾ ಪತ್ರಕ್ಕೆ ಸಹಿ ಹಾಕಬೇಕಿತ್ತು, ಅದು ಈ ರೀತಿ ಇದೆ.

ಈ ಕೆಳಗೆ ಸಹಿ ಮಾಡಿರುವ ನಾನು ತ್ರಿಕರಣ ಶುದ್ಧಿಯಿಂದ ಸತ್ಯಾಗ್ರಹದೀಕ್ಷೆಯನ್ನು ಪಡೆದಿದ್ದೇನೆ. ಮತ್ತೆ ಈ ಕೆಳಕಂಡ ನಿಯಮಗಳನ್ನು ಪಾಲಿಸುತ್ತೇನೆಂದು ವಾಗ್ದಾನ ಮಾಡುತ್ತೇನೆ.

೧. ಮೈಸೂರು ಕಾಂಗ್ರೆಸ್ ಹೂಡಿರುವ ಈ ಸತ್ಯಾಗ್ರಹ ಸಮರದಲ್ಲಿ ಕಾಂಗ್ರೆಸ್ಸಿನ ಎಲ್ಲ ಬೇಡಿಕೆಗಳೂ ಈಡೇರಿ, ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗುವವರೆಗೂ ಸಂಪೂರ್ಣವಾಗಿ ಭಾಗವಹಿಸುತ್ತೇನೆ.
೨. ಪೊಲೀಸರ ಬೆದರಿಕೆಗಳಿಂದಾಗಲಿ ಅವರು ತೋರಿಸುವ ಪ್ರಲೋಭನೆಗಳಿಂದಾಗಲಿ ನಾನು ವಿಮನಸ್ಕನಾಗಿ ನನ್ನ ಕರ್ತವ್ಯಗಳನ್ನು ಎಂದೂ ಮರೆಯುವುದಿಲ್ಲ.
೩. ಸತ್ಯಾಗ್ರಹಿ ಅನುಸರಿಸಬೇಕಾದ ಶಿಸ್ತು, ಶಾಂತಿ, ಧೈರ್ಯಗಳನ್ನು ಕಾಯಾ, ವಾಚಾ, ಮನಸಾ ಪಾಲಿಸುತ್ತೇನೆ. ಎಂತಹ ಕಷ್ಟಪರಿಸ್ಥಿತಿ ಒದಗಿ ಬಂದರೂ ಎದೆಗುಂದದೆ, ಶಾಂತಿ, ಅಹಿಂಸೆಗಳನ್ನು ಸರ್ವಸ್ವವೆಂದು ಭಾವಿಸುತ್ತೇನೆ.

ಸತ್ಯಾಗ್ರಹಿಯ ರುಜು

ಹೆಸರು, ವಿಳಾಸ

ಹೀಗೆ ಸತ್ಯಾಗ್ರಹಿಗಳ ಸಂಘಟನೆ, ಗ್ರಾಮಸ್ಥರ ಘೋಷಣೆ, ಗ್ರಾಮಾಧಿಕಾರಿಗಳ ಅಸಹಕಾರ ಚಳವಳಿಗಳನ್ನು ಬೆಳೆಸುತ್ತಿದ್ದಂತೆ, ಮುಂದೆ ಪ್ರತಿ ಸರ್ಕಾರ ಸ್ಥಾಪನೆ, ಕರನಿರಾಕರಣೆ, ಆಜಾದ್ ಫೌಜ್ ವಿಸ್ತರಣೆಯ ಕಾರ್ಯಕ್ರಮ ಕೈಗೊಳ್ಳುವ ಯೋಜನೆಗಳು ತಯಾರಾಗುತ್ತಿತ್ತು.

ಅಷ್ಟರಲ್ಲಿ ಆರ್ಕಾಟರ ಸರ್ಕಾರ ಕುಸಿದುಬಿದ್ದ ಸುದ್ದಿ ಬಂದು ಅವು ಯಾವುವು ಕಾರ್ಯಗತವಾಗಲಿಲ್ಲ.[೬೧]

## ೪.೪ ಪರಿಣಾಮಗಳು

ಮೈಸೂರು ಸಂಸ್ಥಾನದ ಜನರೆಲ್ಲಾ ಒಟ್ಟುಗೂಡಿದ ಅರಮನೆ ಸತ್ಯಾಗ್ರಹವನ್ನು ಸರ್ಕಾರ ಮಟ್ಟ ಹಾಕಲು ರೂಪಿಸಿದ ತಂತ್ರಗಳೆಲ್ಲಾ ನಾಶವಾಗಿ ಸಂಸ್ಥಾನದ ಕಾರ್ಮಿಕರು, ವಿದ್ಯಾರ್ಥಿಗಳು, ರೈತರು, ಕೊನೆಗೆ ಪೊಲೀಸರು ಸಹ ಸೇರಿ ಚಳವಳಿಗೆ ಸಹಕರಿಸಿದ ಹಿನ್ನೆಲೆಯಲ್ಲಿ ೪೨ ದಿನ ನಡೆದ ಸತ್ಯಾಗ್ರಹವು ಯಶಸ್ವಿಯಾಗಿ, ಕೊನೆಗೆ ಮೈಸೂರು ಸರ್ಕಾರ ಸ್ಥಾಪನೆ ಮಾಡುವುದಕ್ಕೆ ದಿವಾನರು ಮಹಾರಾಜರಿಗೆ ಸೂಚನೆ ನೀಡಿದರು. ಅಕ್ಟೋಬರ್ ೬ರಂದು ಮೈಸೂರು ಕಾಂಗ್ರೆಸ್ ಕಾರ್ಯಾಕಾರಿ ಸಮಿತಿಯ ಸದಸ್ಯರೆಲ್ಲಾ ಬಿಡುಗಡೆ ಹೊಂದಿದರು. ಪ್ರಮುಖ ಕಾಂಗ್ರೆಸ್ ನಾಯಕರನ್ನೆಲ್ಲಾ ಅಕ್ಟೋಬರ್ ೭ರಂದು ಬಿಡುಗಡೆಗೊಳಿಸಿದರು. ಅಕ್ಟೋಬರ್ ೯ರಂದು ಮೈಸೂರು ಕಾಂಗ್ರೆಸ್ ಅಧ್ಯಕ್ಷ ಕೆ.ಸಿ.ರೆಡ್ಡಿಯವರು ಅಂದು ದಿವಾನರಾಗಿದ್ದ ರಾಮಸ್ವಾಮಿ ಮೊದಲಿಯಾರ್ ರವರ ನಡುವೆ ನಡೆದ ಒಪ್ಪಂದದ ಫಲವಾಗಿ ಕಾಂಗ್ರೆಸ್ ಪಕ್ಷಕ್ಕೂ ಮತ್ತು ಸರ್ಕಾರಕ್ಕೂ ಅಕ್ಟೋಬರ್ ೧೧ರಂದು ಒಂದು ಒಪ್ಪಂದವಾಯಿತು.[೬೨]

ಅಕ್ಟೋಬರ್ ೧೨ರಂದು ಕೆ.ಸಿ.ರೆಡ್ಡಿ ಹಾಗೂ ಕಾಂಗ್ರೆಸ್ಸಿನ ಪ್ರಮುಖ ಜನ ನಾಯಕರೊಡನೆ ಮಹಾರಾಜರನ್ನು ಭೇಟಿ ಮಾಡಿದರು. ಸಂಸ್ಥಾನದ ಆಡಳಿದಲ್ಲಿ ಹೆಚ್ಚು ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕೆಂದು ಮಹಾರಾಜರು ತಿಳಿಸಿದರು. ಈ ವಿಷಯವನ್ನು ಕಾಂಗ್ರೆಸ್ ಒಪ್ಪಿಕೊಂಡು ಮುಂದಿನ ಪ್ರಜಾ ಏಳಿಗೆಯ ಕಾರ್ಯಕ್ರಮಗಳಿಗೆ ಜನರು ಸಹಕರಿಸಬೇಕೆಂದು ಕೇಳಿಕೊಂಡಿತು. ಅಕ್ಟೋಬರ್ ೧೩ರಂದು ಸರ್ಕಾರವು ರಾಜ್ಯಾಂಗ ಸುಧಾರಣೆಯನ್ನು ಘೋಷಿಸಿತು. ಕಾಂಗ್ರೆಸ್ ನಾಯಕ ಮುಖ್ಯ ಮಂತ್ರಿಯಾಗಿರುವುದಾಗಿಯೂ, ಹಾಗೂ ದಿವಾನರು ಸ್ವಲ್ಪ ಕಾಲ ಮುಂದುವರೆಯುವುದಾಗಿ ತೀರ್ಮಾನಿಸಲಾಯಿತು.[೬೩] ಮಂತ್ರಿಮಂಡಲ ರಚನೆಯಲ್ಲಿ ಬಹುಮತ ಪಡೆದಿರುವ ಕಾಂಗ್ರೆಸ್ ಪಕ್ಷದಿಂದ ೬ ಜನರನ್ನು ಇನ್ನಿತರ ಪಕ್ಷದಿಂದ ೩ ಜನರನ್ನು ತೆಗೆದುಕೊಳ್ಳುವ್ಯದೆಂದೂ, ಮಂತ್ರಿಮಂಡಲವು ರಾಜ್ಯಾಂಗ ರಚನಾ ಸಭೆ ಸೇರಿಸಲು ಕ್ರಮ ಕೈಗೊಳ್ಳಬಹುದೆಂದೂ, ಅದು ೧೯೪೮ರ ಜುಲೈ ಕೊನೆಯ ಹೊತ್ತಿಗೆ ಸಂಸ್ಥಾನಕ್ಕೆ ಒಂದು ರಾಜ್ಯಾಂಗವನ್ನು ಸಿದ್ದಪಡಿಸಬೇಕೆಂದು ತೀರ್ಮಾನ ಕೈಗೊಳ್ಳಲಾಯಿತು. ಸರ್ಕಾರ ಸತ್ಯಾಗ್ರಹ ಸಂದರ್ಭದಲ್ಲಿ ಬಂಧಿಸಲ್ಪಟ್ಟ ಸತ್ಯಾಗ್ರಹಿಗಳನ್ನೆಲ್ಲಾ ಬಿಡುಗಡೆ ಮಾಡಿತು.

ಈ ಸಂಧರ್ಭದಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲರು ಮೈಸೂರು ಕಾಂಗ್ರೆಸ್ಸಿಗೆ ಯಶಸ್ಸನ್ನು ಕೋರಿ ಒಂದು ಸಂದೇಶವನ್ನು ಕಳುಹಿಸಿದರು. ಅಕ್ಟೋಬರ್ ೧೭ರಂದು ಬಿರ್ಲಾ

ಭವನದಲ್ಲಿ ಸಂಜೆ ವೇಳೆ ನಡೆಯುತ್ತಿದ್ದ ಪ್ರಾರ್ಥನಾ ಸಭೆಯಲ್ಲಿ ಮೈಸೂರಿನ ಬೆಳವಣಿಗೆಗಳನ್ನು ತಿಳಿದು ಗಾಂಧೀಜಿಯವರು ಮಹಾರಾಜರನ್ನು ಮತ್ತು ಮೈಸೂರು ಕಾಂಗ್ರೆಸ್ ನಾಯಕರನ್ನು ಅಭಿನಂದಿಸಿದರು.[೬೪]

ಮೈಸೂರು ಸಂಸ್ಥಾನದಲ್ಲಿ ಶತಮಾನಗಳಿಂದಲೂ ಜನರಿಗೆ ವಿಶೇಷವಾದ ದಿನ ವಿಜಯದಶಮಿ ಎಂದು ಪರಿಗಣಿಸಲ್ಪಟ್ಟಿದೆ. ೧೯೪೭ ಅಕ್ಟೋಬರ್ ೨೪ ವಿಜಯದಶಮಿಯಂದು ಪ್ರಜಾನಾಯಕರುಗಳಿಂದ ಕೂಡಿದ ಹೊಸ ಮಂತ್ರಿಮಂಡಲವು ಕೆ.ಸಿ.ರೆಡ್ಡಿಯವರ ಮುಖ್ಯಮಂತ್ರಿತ್ವದಲ್ಲಿ ಅಧಿಕಾರ ವಹಿಸಿಕೊಂಡು ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ಬುನಾದಿ ಹಾಕಿತು. ಅಂದು ರಾಜಪ್ರಭುತ್ವವನ್ನು ಕಿತ್ತೊಗೆದು ಪ್ರಜಾರಾಜ್ಯವನ್ನು ಸ್ಥಾಪಿಸಿ, ಮೂರು ದಶಕಗಳ ಕಾಲ ರಾಜಮನೆತನದೊಡನೆ ಮತ್ತು ಬ್ರಿಟಿಷ್ ಸಾಮ್ರಾಜ್ಯಶಾಹಿಯೊಡನೆ ನಡೆಸಿದ ಹೋರಾಟ ಅಂತ್ಯಗೊಂಡ ದಿನವಾಯಿತು. ದೇಶಕ್ಕೆ ಸ್ವಾತಂತ್ರ್ಯವನ್ನು ಕ್ವಿಟ್ ಇಂಡಿಯಾ ಚಳವಳಿ ತಂದುಕೊಟ್ಟರೆ, ರಾಜ್ಯಕ್ಕೆ ಜವಾಬ್ದಾರಿ ಸರ್ಕಾರವನ್ನು ಮೈಸೂರು ಚಲೋ ಚಳವಳಿ ತಂದುಕೊಟ್ಟಿತು. ಕೆ.ಸಿ.ರೆಡ್ಡಿ ಸರ್ಕಾರ ನವೆಂಬರ್ ೧ರಂದು 'ಮೈಸೂರು ಬಿಡುಗಡೆ'ಯ ದಿನವನ್ನು ಆಚರಿಸಲು ಕರೆ ಕೊಟ್ಟಿತು. ಅದೇ ದಿನ ೧೯೫೬ರಲ್ಲಿ ಕನ್ನಡ ಜನತೆ ಒಂದುಗೂಡಿದರು. ಹಾಗೂ ಕರ್ನಾಟಕ ಏಕೀಕರಣಕ್ಕೆ ಈ ಹೋರಾಟವು ಭದ್ರ ಬುನಾದಿಯನ್ನು ಹಾಕಿತು. ಕರ್ನಾಟಕದ ಜನತೆಯಲ್ಲಿ ಸ್ವಾಭಿಮಾನದ ಕಿಚ್ಚನ್ನು ಹಚ್ಚಿಸಿ ಎಲ್ಲರೂ ಒಂದುಗೂಡುವ ಭರವಸೆಯನ್ನು ತಂದುಕೊಟ್ಟಿತು. ಕನ್ನಡ ನಾಡು, ನುಡಿ, ಭಾಷೆ ಮತ್ತು ಸಂಸ್ಕೃತಿ ಪ್ರಧಾನ ವಿಚಾರವಾಗಿ ಆ ಮೂಲಕ ಹೊಸರಾಜ್ಯ ನಿರ್ಮಾಣಗೊಂಡಿತು. ಇದೆಲ್ಲಾ ನಂತರದ ಬೆಳವಣಿಗೆಯಾದರೂ ಅದು ಸಾಧ್ಯವಾದದ್ದು ಆರಂಭದ ಚಳವಳಿಗಳ ಮೂಲಕವೇ. ಕೊನೆಗೆ ಮೈಸೂರು ಸಂಸ್ಥಾನ ಪ್ರಜಾಪ್ರಭುತ್ವ ಮಾದರಿಗೆ ಹೊಂದಿಕೊಂಡು ಸಾಗಿತು.

## ಕೊನೆಟಿಪ್ಪಣಿಗಳು

೧. ಪ್ರಾಣೇಶ್‌ರಾವ್ ಬಿ.ಆರ್., **ಯಶೋಧರಾ ದಾಸಪ್ಪ ಮತ್ತು ಹೆಚ್.ಸಿ.ದಾಸಪ್ಪ ಜೀವನ ಮತ್ತು ಸಾಧನೆ**, ಮೈಸೂರು, ೧೯೯೭, ಪು. ೮೦

೨. ವೀರತಪ್ಪ ಕೆ., **ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ**, ಬೆಂಗಳೂರು, ೧೯೭೭, ಪು. ೨

೩. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು**, ತಿಪಟೂರು, ೨೦೦೨, ಪು. ೨೩

೪. ನರಸಿಂಹಯ್ಯ ಹೆಚ್., **ಕ್ವಿಟ್ ಇಂಡಿಯಾ ಮತ್ತು ಮೈಸೂರು ಚಲೋ**, ಬೆಂಗಳೂರು, ೧೯೯೩, ಪು. ೨೭

೫. ವೆಂಕಟರಮಣ ಡಿ.ಆರ್., **ವಿರಕ್ತ ರಾಷ್ಟ್ರಕ ಡಿ.ವಿ.ಜಿ.** ಸಂ ೧೪,೧೯೯೯, ಪು. ೬೬

೬. ವೀರತಪ್ಪ ಕೆ., ಮೇಲಿನದೇ, ಪು. ೩೫

೭. ಮಜುಂದಾರ್ ಆರ್.ಸಿ., **ಸ್ವಾತಂತ್ರ್ಯ ಸಂಗ್ರಾಮ**, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮, ಪು. ೮೫

೮. ವೀರತಪ್ಪ ಕೆ., **ಪೂರ್ವೋಕ್ತ**, ಪು. ೧೩

೯. ಮಜುಂದಾರ್ ಆರ್.ಸಿ., **ಪೂರ್ವೋಕ್ತ**, ಪು. ೧೦೯

೧೦. ವೀರಣ್ಣಗೌಡ ಹೆಚ್.ಕೆ., **ಬದುಕು ಮೆಲುಕು**, ಪ್ರಭುದ್ಧ ಪ್ರಕಾಶನ, ಮೈಸೂರು, ೧೯೨೪, ಪು. ೧೫೬

೧೧. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., **ಕರ್ನಾಟಕ ಇತಿಹಾಸ ದರ್ಶನ**, ಬೆಂಗಳೂರು, ೧೯೭೦, ಪು. ೬೫೨

೧೨. ವೀರಣ್ಣಗೌಡ ಹೆಚ್.ಕೆ., ಮೇಲಿನದೇ, ೧೧೪

೧೩. ವೀರಣ್ಣಗೌಡ ಹೆಚ್.ಕೆ., **ಬದುಕು ಮೆಲುಕು**, ಬೆಂಗಳೂರು, ೧೯೭೪, ಪು. ೧೫೭

೧೪. **ಪಿ.ಎಂ.ಆರ್.ಎ.**

೧೫. ಚಂದ್ರಶೇಖರ್ ಎಸ್., **ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು**, ಬೆಂಗಳೂರು, ೧೯೮೩, ಪು. ೩೫

೧೬. ವೀರತಪ್ಪ ಕೆ., **ಪೂರ್ವೋಕ್ತ**, ಪು. ೩೪

೧೭. ಮಜುಂದಾರ್ ಆರ್.ಸಿ., **ಸ್ವಾತಂತ್ರ್ಯ ಸಂಗ್ರಾಮ**, ಸಂ.೨೪, ಭಾರತೀಯ ವಿಧ್ಯಾಭವನ, ಬೆಂಗಳೂರು, ೧೯೯೮, ಪುಟ. ೨೫೯–೨೭೦

೧೮. ಶಂಕರನಾರಾಯಣ್‌ರಾವ್ ಎನ್.ಪಿ., **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು**, ಬೆಂಗಳೂರು, ೧೯೯೧, ಪು. ೨೭೯

೧೯. ವೀರತಪ್ಪ ಕೆ., **ಪೂರ್ವೋಕ್ತ**, ಪು. ೪೨

೨೦. ವೆಂಕಟಕೃಷ್ಣಪ್ಪ ಕೆ., **ಕೋಲಾರ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು**, ಕೋಲಾರ, ೧೯೦೮, ಪು. ೩೪

೨೧. **ಮೈಸೂರು ಕಾಂಗ್ರೆಸ್ ಪಕ್ಷದ ಪ್ರಕಟಣೆಗಳು** (೧೯೩೯)

೨೨. **ಮೈಸೂರು ಕಾಂಗ್ರೆಸ್ ಪಕ್ಷದ ಪ್ರಕಟಣೆಗಳು** (೧೯೪೦)

೨೩. ಕೃಷ್ಣರಾವ್ ಎಂ.ವಿ., ಮೇಲಿನದೇ, ಪು. ೬೬೦-೬೬೩

೨೪. ದೊರೆಸ್ವಾಮಿ ಎಚ್.ಎಸ್., **ಹೋರಾಟದ ದಿಟ್ಟ ಹೆಜ್ಜೆಗಳು**, ಬೆಂಗಳೂರು, ೧೯೭೨, ಪು. ೪೭

೨೫. **ಮೈಸೂರು ಕಾಂಗ್ರೆಸ್ ಪ್ರಕಟಣೆಗಳು.**

೨೬. ಉಮಾದೇವಿ ಕಣವಿ., ೧೯೪೨ರ **ಸ್ವತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟದ ಮಹಿಳೆಯರ ಪಾತ್ರ** (ಅಪ್ರಕಟಿತ ಎಂ.ಫಿಲ್. ಪ್ರಬಂಧ), ೧೯೯೫, ಪು. ೪೫

೨೭. ಕೃಷ್ಣರಾವ್ ಎಂ.ವಿ., ಮೇಲಿನದೇ ಪು. ೬೬೪

೨೮. ವೀರತಪ್ಪ ಕೆ., **ಪೂರ್ವೋಕ್ತ** ಪು. ೧೦೮-೧೦೯

೨೯. ಕಾಮತ್ ಎಸ್., **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂ.೨, ಮೈಸೂರು, ೧೯೭೭, ಪು. ೪೮

೩೦. ದಿವಾಕರ ರಂ.ರಾ., **ಕರ್ನಾಟಕ ಏಕೀಕರಣ ಕಥೆ**, ಹುಬ್ಬಳ್ಳಿ - ಬೆಂಗಳೂರು, ೧೯೯೩, ಪು. ೩೪

೩೧. ವೀರತಪ್ಪ ಕೆ., ಮೇಲಿನದೇ, ಪು. ೧೧೬

೩೨. ವೀರತಪ್ಪ ಕೆ., ಮೇಲಿನದೇ, ಪು. ೧೧೭-೧೧೮

೩೩. ನರಸಿಂಹಯ್ಯ ಹೆಚ್., **ಹೋರಾಟದ ಹಾದಿ (ಆತ್ಮಕಥೆ)**, ನ್ಯಾಷನಲ್ ಕಾಲೇಜ್, ಬೆಂಗಳೂರು, ೧೯೯೪, ಪು. ೫೬

೩೪. ಕಾಮತ್ ಎಸ್., ಮೇಲಿನದೇ, ಪು. ೪೬

೩೫. ಕಾಮತ್ ಎಸ್., ಮೇಲಿನದೇ, ಪು. ೪೯

೩೬. ದೊರೆಸ್ವಾಮಿ ಎಚ್.ಎಸ್., ಮೇಲಿನದೇ, ಪು. ೯೮

೩೭. ಪ್ರಾಣೇಶ್‌ರಾವ್ ಬಿ.ಆರ್., ಮೇಲಿನದೇ, ಪು. ೮೧-೮೩

೩೮. ವೀರತಪ್ಪ ಕೆ., ಮೇಲಿನದೇ, ಪು. ೧೨೧

೩೯. ದೊರೆಸ್ವಾಮಿ ಎಚ್.ಎಸ್., ಪು. ೮೦

೪೦. ಅದೇ, ಪು. ೮೬

೪೧. ಅದೇ, ಪು. ೮೮

೪೨. **ಸಾಧ್ವಿ ಪತ್ರಿಕೆ**, ಸೆಪ್ಟೆಂಬರ್ ೪, ೧೯೪೭

೪೩. **ಪೌರವಾಣಿ** ಪತ್ರಿಕೆ.

೪೪. **ಸಾಧ್ವಿ ಪತ್ರಿಕೆ**, ಸೆಪ್ಟೆಂಬರ್ ೭, ೧೯೪೭

೪೫. **ಸಾಧ್ವಿ ಪತ್ರಿಕೆ**, ಸೆಪ್ಟೆಂಬರ್ ೬, ೧೯೪೭

೪೬. **ದೊರೆಸ್ವಾಮಿ ಎಚ್.ಎಸ್ ರವರ ಸಂದರ್ಶನ**

೪೭. **ಪೊಲೀಸ್ ಕಡತಗಳು**, ೧೯೪೭, ಸೆಪ್ಟೆಂಬರ್ ೧೪

೪೮. ದೊರೆಸ್ವಾಮಿ ಎಚ್.ಎಸ್. ರವರ ಸಂದರ್ಶನ

೪೯. ನಾರಾಯಣರಾವ್ ಸಿ.ಎಸ್., **ಸ್ವಾತಂತ್ರ್ಯ ಹೋರಾಟದ ಉಜ್ವಲ ಕಿಡಿ**, ಬೆಂಗಳೂರು, ೨೦೦೭, ಪು. ೪೬-೪೮

೫೦. **ಪ್ರೊಸೀಡಿಂಗ್ಸ್ ಆಫ್ ಕರ್ನಾಟಕ ಹಿಸ್ಟರಿ ಕಾಂಗ್ರೆಸ್.**, ೨೦೦೮, ಪು. ೨೨೫ - ೨೨೯

೫೧. ಕಮಲಾ ಸಂಪಳ್ಳಿ., **ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರ ವನಿತೆಯರು**, ಬೆಂಗಳೂರು, ೧೯೯೨, ಪು. ೪೭

೫೨. ಚಂದ್ರಶೇಖರ್ ಎಸ್., (ಸಂ) **ಕರ್ನಾಟಕ ಚರಿತ್ರೆ, ಸಂ.೭**, ಕ.ವಿ.ವಿ. ಹಂಪಿ, ಪು. ೧೩೩-೧೩೫

೫೩. ದೊರೆಸ್ವಾಮಿ ಎಚ್.ಎಸ್., **ಮೇಲಿನದೇ**, ಪು. ೧೧೪

೫೪. **ಸಾಧ್ವಿ ಪತ್ರಿಕೆ** (ಸೆಪ್ಟೆಂಬರ್ ತಿಂಗಳಲ್ಲಿ ಸುಮಾರು ೪೦ ಮೀಟರುಗಳಷ್ಟು ದೂರದಿಂದ ಮಧ್ಯಾಹ್ನ ೧-೪೫ ಕ್ಕೆ ಕೇಳುತ್ತಿತ್ತು.)

೫೫. ಹೆಗಡೆ ವಿ.ಎಸ್., (ಸಂ), **ಸ್ವಾತಂತ್ರ್ಯ ಚಳವಳಿಯ ಕರಪತ್ರಗಳು**, ಬೆಂಗಳೂರು, ೨೦೦೫.

೫೬. **ಸಾಧ್ವಿ ಪತ್ರಿಕೆ**

೫೭. **ಸತ್ಯಾವಾದಿ ನ್ಯೂಸ್ ಪೇಪರ್ಸ್**, ೧೯೪೭

೫೮. ದೊರೆಸ್ವಾಮಿ ಎಚ್.ಎಸ್., **ಮೇಲಿನದೇ**, ಪು. ೧೦೬-೧೦೮

೫೯. ದೊರೆಸ್ವಾಮಿ ಎಚ್.ಎಸ್., **ಮೇಲಿನದೇ**, ಪು. ೧೦೭

೬೦. ದೊರೆಸ್ವಾಮಿ ಎಚ್.ಎಸ್., **ಮೇಲಿನದೇ**, ಪು. ೧೦೯-೧೧೦

೬೧. **ಸಾಧ್ವಿ ಪತ್ರಿಕೆ**, ೧೯೪೭, ಅಕ್ಟೋಬರ್ ೧೨

೬೨. ವೀರತಪ್ಪ ಕೆ., **ಮೇಲಿನದೇ**, ಪು. ೪೮

೬೩. ಅದೇ, ಪು. ೫೩

೬೪. **ದಿ ಹಿಂದೂ ಪತ್ರಿಕೆ**, ೧೯೪೭, ೧೮ನೇ ತಾರೀಕು.

* * *

ಅಧ್ಯಾಯ – ೫

# ಜವಾಬ್ದಾರಿ ಸರ್ಕಾರ ಸ್ಥಾಪನೆ

೫.೧ ರಾಜಪ್ರಭುತ್ವದಿಂದ ಪ್ರಜಾಪ್ರಭುತ್ವಕ್ಕೆ
೫.೨ ಕೆ.ಸಿ. ರೆಡ್ಡಿ ನೇತೃತ್ವದ ಮಂತ್ರಿಮಂಡಲ ರಚನೆ
೫.೩ ಹೊಸ ಸವಾಲುಗಳು

ಅಧ್ಯಾಯ ೫

# ಜವಾಬ್ದಾರಿ ಸರ್ಕಾರ ಸ್ಥಾಪನೆ

## ೫.೧ ರಾಜಪ್ರಭುತ್ವದಿಂದ ಪ್ರಜಾಪ್ರಭುತ್ವಕ್ಕೆ

ರಾಜತಾಂತ್ರಿಕ ಸಂಸ್ಥೆಗಳು, ಅಧಿಕಾರದ ಹಂಚುವಿಕೆಯ ನಿಯಮಾವಳಿಗಳು ಹಾಗೂ ರಾಜನೀತಿಯ ಚಟುವಟಿಕೆಗಳು ಒಂದು ಸಮಾಜದಿಂದ ಇನ್ನೊಂದು ಸಮಾಜಕ್ಕೆ ವಿಶಿಷ್ಟವಾಗಿರುತ್ತವೆ. ಆದರೆ ರಾಜಕೀಯ ಪ್ರಕ್ರಿಯೆಯು ಮಾತ್ರ ವಿಶ್ವವ್ಯಾಪ್ತಿಯಾಗಿರುವುದಾಗಿದೆ. ಪ್ರಪಂಚದ ವಿವಿಧ ಕಾಲಗಳಲ್ಲಿ ಸಂದರ್ಭ ಮತ್ತು ಪರಿಸ್ಥಿತಿಗಳನ್ನು ಅನುಸರಿಸಿ ಅನೇಕ ಬಗೆಯ ಆಡಳಿತ ವ್ಯವಸ್ಥೆಗಳನ್ನು ಕಾಣಬಹುದಾಗಿದೆ. ಅದರಲ್ಲೂ ಪ್ರತಿಯೊಂದು ಪ್ರದೇಶದಲ್ಲಿ ಹಿಂದೆ, ರಾಜಪ್ರಭುತ್ವವೆಂಬ ನಿರಂಕುಶ ಆಡಳಿತ ವ್ಯವಸ್ಥೆ ಚರಿತ್ರೆಯಲ್ಲಿ ನಮೂದಿಸಲ್ಪಟ್ಟಿದೆ. ಈ ರೀತಿಯ ರಾಜಪ್ರಭುತ್ವವನ್ನು ಮೈಸೂರು ಸಂಸ್ಥಾನದಲ್ಲಿಯೂ ಕಾಣಬಹುದು. ಇಲ್ಲಿ ರಾಜತ್ವ ಪದವಿಯನ್ನು ರಾಜನು ಹೊಂದಿರುತ್ತಾನೆ. ಹಾಗೂ ಎಲ್ಲ ಅಧಿಕಾರ ವ್ಯವಸ್ಥೆಗಳಿಗಿಂತ ಬಲಯುತವಾದ, ಅಪರಿಮಿತವಾದ ಶಕ್ತಿಯನ್ನು ಹೊಂದಿರುತ್ತಾನೆ. ಈ ರಾಜಪ್ರಭುತ್ವವು ಎಲ್ಲ ದೇಶಗಳಲ್ಲಿ ಕಂಡುಬರುವ ಆಡಳಿತ ಪದ್ಧತಿಯಾಗಿದೆ. ಇಲ್ಲಿ ರಾಜನು ಪ್ರಜೆಗಳ ಮೇಲೆ ಪ್ರಭುತ್ವ ಪಡೆದಿರುತ್ತಿದ್ದನು. ಸಮಾಜದಲ್ಲಿನ ಜನರು ರಾಜನೆಂಬ ಸರ್ವಾಧಿಕಾರಿಗೆ ಹೆಚ್ಚಿನ ಅಧಿಕಾರವನ್ನು ನೀಡಿದ್ದರು.

ಮೈಸೂರು ಸಂಸ್ಥಾನ ೧೭೯೯ರಿಂದ ಬ್ರಿಟಿಷರ ಕೈಸೇರಿದ ಮೇಲೆ ಪೂರ್ತಿಯಾಗಿ ಬ್ರಿಟಿಷ್ ವಸಾಹತುಶಾಹಿಯ ಸೃಷ್ಟಿಯಾಗಿ ಬೆಳೆದು ೧೯೪೭ರ ವರೆಗೂ ಹಾಗೆಯೇ ಉಳಿಯಿತು. ಬ್ರಿಟಿಷ್ ಪ್ರಭುತ್ವದ ಅಧೀನದಲ್ಲಿ ರಾಜಪ್ರಭುತ್ವವಿದ್ದು, ಇವೆರಡರ ಕೆಳಗೆ ಜನಪ್ರಭುತ್ವವು ಆಳಲ್ಪಡುತ್ತಿತ್ತು. ಇಲ್ಲಿ ದ್ವಿ ಪ್ರಭುತ್ವದ ಅಡಿಯಲ್ಲಿ ಮೈಸೂರು ಜನತೆ ಸಿಲುಕಿದ್ದರು. ಬ್ರಿಟಿಷ್ ವಸಾಹತು ಆಡಳಿತಗಾರರಿಗೆ ಮೈಸೂರಿನ ಅರಸರ ವಿರುದ್ಧ ಸಿಡಿದೇಳುವ ಪ್ರಮೆಯವೇ ಇರಲಿಲ್ಲ. ಕಾರಣ ವಸಾಹತುಶಾಹಿಗಳು ಮಾಡಬಯಸಿದ್ದನ್ನು ಮೈಸೂರಿನ ಅರಸರೆ ಮಾಡುತ್ತಿದ್ದರು. ಹೀಗಾಗಿ ಮೈಸೂರಿನ ಏಕವ್ಯಕ್ತಿ ಆಳ್ವಿಕೆಯನ್ನು ಬ್ರಿಟಿಷರು ಬಹಳ

ಹುಮ್ಮನಸ್ಸಿನಿಂದಲೇ ಪ್ರೋತ್ಸಾಹಿಸಿದರು. ಮೈಸೂರು ರಾಜಶಾಹಿಯು ಬ್ರಿಟಿಷ್ ಸರ್ವಾಧಿಕಾರತ್ವದಂತೆ ತನ್ನದೇ ಆದ ನೀತಿ ನಿಯಮಗಳನ್ನು ಜಾರಿಗೊಳಿಸಿತು. ವಸಾಹತುಶಾಹಿಯು, ರಾಜ್ಯಾಧಿಕಾರವನ್ನು ನಿಯಂತ್ರಿಸುವ ಅಸ್ತ್ರವಾಗಿತ್ತು. ರಾಜಶಾಹಿಯು ತನಗೆ ದೊರೆತಿರುವ ಅಪರಿಮಿತ ಅಧಿಕಾರದಿಂದಾಗಿ ಹಾಗೂ ಅವನ ಆಡಳಿತ ವರ್ಗವಾದ ದಿವಾನರನ್ನೊಳಗೊಂಡಂತೆ ಕೆಲವೊಮ್ಮೆ ಪ್ರಜಾಪೀಡಿತರಾಗಿ ಬದಲಾಗುತ್ತಿದ್ದರು. ಸಂಸ್ಥಾನದ ರಾಜ ಮತ್ತು ದಿವಾನರು ವಸಾಹತುಶಾಹಿಯ ನೀತಿಯಂತೆ ತನ್ನದೇ ರೀತಿಯಲ್ಲಿ ಜನತಾಂತ್ರಿಕ ಶಕ್ತಿಯ ವಿಕಾಸಕ್ಕೆ ಪ್ರತಿರೋಧ ಒಡ್ಡುತ್ತಿದ್ದರು. ಈ ವ್ಯವಸ್ಥೆಯಲ್ಲಿ ರಾಜನಲ್ಲಿ ಸಂಪೂರ್ಣವಾಗಿ ನಿರಂಕುಶ ಪ್ರಭುತ್ವವು ಬೇರೂರಿರುತ್ತದೆ. ಅವನನ್ನು ಪ್ರಶ್ನಿಸುವ ಹಕ್ಕು ಪ್ರಜೆಗಳಿಗಿರುವುದಿಲ್ಲ. ಅರಸನಿಗೆ ಸಹಾಯಕರಾಗಿ ದಿವಾನರನ್ನು ಹಾಗೂ ಆಡಳಿತ ವರ್ಗವನ್ನು ವಸಾಹತುಶಾಹಿಗಳು ರೂಪಿಸಿದರು. ಈ ವ್ಯವಸ್ಥೆ ಪ್ರಭುತ್ವ ವ್ಯವಸ್ಥೆಗೆ ಹತ್ತಿರವಾಗಿದ್ದರೂ, ಪ್ರಜಾತಂತ್ರ ಮಾದರಿಯದ್ದಲ್ಲವೆಂದು ಹೇಳಬಹುದು.

ಮೈಸೂರು ಸಂಸ್ಥಾನದಲ್ಲಿ ವಸಾಹತುಶಾಹಿಯ ಪ್ರವೇಶದ ಬಳಿಕ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಬ್ರಿಟಿಷ್ ಹಾಗೂ ರಾಜಪ್ರಭುತ್ವಗಳು ಆಳ್ವಿಕೆ ನಡೆಸತೊಡಗಿದವು. ೧೮೩೧ರಿಂದ ೧೮೮೦ರ ವರೆಗೆ ಮೈಸೂರಿನ ಅರಸರು ಬ್ರಿಟಿಷರ ಸ್ನೇಹ ಹಾಗೂ ಹಿತವನ್ನು ಬಯಸುತ್ತಿದ್ದರು. ಕಾರಣ ರಾಜಶಾಹಿಯ ಆಳ್ವಿಕೆಯನ್ನು ಪುನರ್ ಪಡೆಯಲು. ಸರ್ ಮಾರ್ಕ್ ಕಬ್ಬನ್ ಹೇಳಿದಂತೆ "೧೮೫೭ರ ಕಷ್ಟ ಕಾಲದಲ್ಲಿಯೂ ಬ್ರಿಟಿಷ್ ರಾಜಭಕ್ತಿಗೆ ಅವಿಶ್ವಾಸವೆನಿಸುವ ಯಾವುದನ್ನು ಸಹಿಸದೆ, ಇಂಗ್ಲಿಷರ ರಾಜ್ಯಾಡಳಿತ ಸುಭದ್ರತೆಯ ವಿಷಯದಲ್ಲಿ ತಮ್ಮ ಪೂರ್ಣ ವಿಶ್ವಾಸವನ್ನು ಘೋಷಿಸುವ ಎಲ್ಲ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತ ವಿಧೇಯತೆಯಿಂದ ಇದ್ದರು".[೧] ೧೮೮೧ರಲ್ಲಿ ೧೦ನೆ ಚಾಮರಾಜ ಒಡೆಯರ್ ಸಿಂಹಾಸನರೂಢವಾಗಿ, ಮತ್ತೆ ರಾಜ್ಯಾಧಿಕಾರ ವರ್ಗಾವಣೆ ಪತ್ರದ ಷರತ್ತುಗಳಿಗನುಗುಣವಾಗಿ ರಾಜರಿಗೆ ಆಡಳಿತದ ಅಧಿಕಾರವನ್ನು ಕೊಡಲಾಯಿತು. ಅದರ ಪ್ರಕಾರ ಬ್ರಿಟಿಷರ ಪರಮಾಧಿಕಾರ ಶೃತವಾಗಿತ್ತು. ಇಬ್ಬರು ಸಲಹೆಗಾರರಿಂದ ಕೂಡಿದ ದಿವಾನರು ರಾಜ್ಯದ ಆಡಳಿತಾಂಗದ ಮುಖ್ಯರಾಗಿ ಕೆಲಸಮಾಡಲು ಅವಕಾಶವಾಯಿತು. ಆಗ ದಿವಾನರಾಗಿ ರಂಗಾಚಾರ್ಲುರವರು ನೇಮಿಸಲ್ಪಟ್ಟರು.

ರಾಜಪ್ರಭುತ್ವ ಅಸ್ತಿತ್ವದಲ್ಲಿದ್ದ ಸಂದರ್ಭದಲ್ಲಿಯೇ ಉದಾರವಾದಿ, ಸಂವಿಧಾನಾತ್ಮಕ ಹಾಗೂ ಪ್ರಜ್ಞಾವಂತ ರಾಜಪ್ರಭುತ್ವವೆನ್ನುವ ಸರಕಾರದ ವಿವಿಧ ಮಾದರಿಗಳು ಕಾಣಿಸಿಕೊಂಡಿರುವುದು ಯುರೋಪಿನ ಚರಿತ್ರೆಯಿಂದ ತಿಳಿದುಬರುತ್ತದೆ. ಇದು ರಾಜಪ್ರಭುತ್ವ ಸಂದರ್ಭಕ್ಕನುಗುಣವಾಗಿ ಮಾಡಿಕೊಂಡಿರುವ ಮಾರ್ಪಾಡುಗಳನ್ನು ತಿಳಿಸುತ್ತದೆ.

ಮೈಸೂರು ಸಂಸ್ಥಾನದಲ್ಲಿಯೂ ಸಹ ದಿವಾನರಿಂದ ಜನತಂತ್ರ ಕಾರ್ಯಗಳು ಕಂಡುಬರತೊಡಗಿದವು. ಈ ವೇಳೆಗೆ ಹಲವಾರು ಕಾರಣಗಳಿಂದ ಮೈಸೂರು ಸಂಸ್ಥಾನದಲ್ಲಿ ಒಂದು ಪ್ರತಿನಿಧಿ ಸಭೆಯನ್ನು ದಿವಾನರು ಸ್ಥಾಪಿಸಿದರು. ಇದು ಶಾಸನಬದ್ಧ ಸಂಸ್ಥೆಯಲ್ಲದಿದ್ದರು ಪ್ರತಿನಿಧಿ ಪ್ರಭುತ್ವದ ದಿಸೆಯಲ್ಲಿ ಪ್ರಥಮ ಹೆಜ್ಜೆಯಾಗಿತ್ತು. ಪ್ರಜಾಪ್ರಭುತ್ವವಾದಿ ಸಂಸ್ಥೆ ೧೮೮೧ರಲ್ಲಿ ಮೈಸೂರು ಸಂಸ್ಥಾನದಲ್ಲಿ ಜನ್ಮತಳೆಯಿತು. ಇದು ನಾವು ಈಗ ಅರ್ಥೈಸುವ ರೀತಿಯಲ್ಲಿ ಪ್ರಜಾಪ್ರಭುತ್ವವಾದಿಯಾಗಿರಲ್ಲಿಲ್ಲ. ಆದ್ದರಿಂದ ಇದನ್ನು ಪ್ರಾಯೋಗಿಕ ಎಂದು ಕರೆಯಬಹುದು.[೨] ಪ್ರಜಾಪ್ರಭುತ್ವ ವ್ಯವಸ್ಥೆಗೆ ಅದನ್ನು ಹುಟ್ಟುಹಾಕಿದವರ ಮೂಲ ಉದ್ದೇಶವೇನೆ ಇರಲಿ, ತನ್ನದೇ ಆದ ತಾರ್ಕಿಕ ಬೆಳವಣಿಗೆ ಇರುತ್ತದೆ ಎನ್ನುವುದು ಇದರಿಂದ ತಿಳಿಯುತ್ತದೆ. ಆದರೆ ಪ್ರಜಾಪ್ರಭುತ್ವ ವ್ಯವಸ್ಥೆ ಜನಸಾಮಾನ್ಯರ ಆಶಯದ ಫಲವಾಗಿರದಿದ್ದುದರಿಂದ ನಾವು ಕಾಣುವ ಸಾಂವಿಧಾನಿಕ ಬದಲಾವಣೆ ಕೇವಲ ತೋರಿಕೆಯ ಬದಲಾವಣೆ ಮಾತ್ರವಾಗಿದ್ದು, ಗಣ್ಯರ ಹಿತಾಸಕ್ತಿಗಳಿಗೆ ಯಾವ ದಕ್ಕೆಯನ್ನು ಉಂಟುಮಾಡಲಿಲ್ಲ. ಮತ್ತು ಒಂದು ಆಸಕ್ತಿಯನ್ನು ಕೆರಳಿಸುವ ಅಂಶವೆಂದರೆ ಈ ತೋರಿಕೆಯ ಬದಲಾವಣೆಗೆ ಕಾರಣರಾದವರು ಪ್ರಾತಿನಿಧಿಕ ಸಭೆಯ ಸದಸ್ಯರಾಗಿದ್ದ ಯುರೋಪಿನ ಪ್ಯಾಂಟರ್ಸ್ ಎಂಬುದು. ಇದಕ್ಕೆ ವಿರುದ್ಧವಾಗಿ ಬದಲಾವಣೆಯನ್ನು ಒಪ್ಪಿಕೊಳ್ಳದೆ ಯಥಾಸ್ಥಿತಿವಾದವನ್ನು ಬೆಂಬಲಿಸಿದವರು ಸಂಸ್ಥಾನಿಕರು.

ಪ್ರಜಾಪ್ರಭುತ್ವದ ದೀರ್ಘ ಇತಿಹಾಸವಿದ್ದ ಯುರೋಪಿನ ಜನಸಾಮಾನ್ಯರಲ್ಲಿ ತಮ್ಮ ಹಿತ ರಕ್ಷಣೆಗೆ ವ್ಯವಸ್ಥೆಯನ್ನೇ ಬದಲಾಯಿಸುವ ರಾಜಕೀಯ ಪ್ರಜ್ಞೆ ಆಳವಾಗಿ ಬೇರೂರಿದಂತೆ, ಆಗತಾನೆ ಇಂತಹ ಪ್ರಯೋಗವನ್ನು ಪ್ರಾದೇಶಿಕ ಜನರಲ್ಲಿ ಕಾಣುತ್ತಿದ್ದು, ಅದು ಸಂಸ್ಥಾನಿ ಜನರಲ್ಲಿ ಬೇರೂರಲಿಲ್ಲ. "ತಮಗೆ ಸಿಗದ ಅಧಿಕಾರ ಮತ್ತು ಸವಲತ್ತು ತಮ್ಮ ಸ್ವಾಭಾವಿಕ ಹಕ್ಕು ಎನಿಸದೆ, ಅದು ಮಹಾರಾಜರ ಕೃಪೆ" ಎನ್ನುವ ಭಾವನೆಯನ್ನೆ ಸ್ಥಳೀಯ ಸದಸ್ಯರು ಹೊಂದಿದ್ದರು.[೩] ಈ ಪರಿಸ್ಥಿತಿಯಲ್ಲಿ ಇಡೀ ವ್ಯವಸ್ಥೆಯನ್ನೆ ಪ್ರಶ್ನಿಸದೆ ಅದರೊಳಗೆ ತಮಗೆ ಮತ್ತು ತಮ್ಮವರಿಗೆ ಹೆಚ್ಚು ಸೌಲಭ್ಯ, ಸವಲತ್ತುಗಳ ಮೀಸಲನ್ನು ಬೇಡುವುದು ಸಂಸ್ಥಾನಿಗರಿಗೆ ಉಳಿದಿದ್ದ ಮಾರ್ಗ. ಆಳುವ ವರ್ಗದವರಿಗೂ ಸಹ ಎಲ್ಲಿಯವರೆಗೆ ಸದಸ್ಯರ ಬೇಡಿಕೆಗಳು ವ್ಯವಸ್ಥೆಯ ಮೂಲವನ್ನೇ ಪ್ರಶ್ನಿಸುವುದಿಲ್ಲವೊ ಅಲ್ಲಿಯವರೆಗೆ ಅಂತಹ ಬೇಡಿಕೆಗಳನ್ನು ಮಾನ್ಯಮಾಡುವುದರಲ್ಲಿ ಯಾವ ಆತಂಕವೂ ಇರುವುದಿಲ್ಲ. ಸಂಸ್ಥಾನಿ ಜನರಿಗೆ ತಮ್ಮ ಸೀಮಿತ ಬೇಡಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಮಾತ್ರ ಈ ಸಂಸ್ಥೆ ಅಗತ್ಯವಾಗಿತ್ತು. ಆಳುವವರಿಗೂ ಜನರ ಅಸಂತೃಪ್ತಿ ವ್ಯವಸ್ಥೆಯ ಮೂಲಕ್ಕೆ ನೋವಾಗದಂತೆ ತಪ್ಪಿಸುವುದರಲ್ಲಿತ್ತು.

ಈಗ ತೋರಿಕೆಗೆ ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರಭುತ್ವ ಮಾದರಿ ಎಂದು ಗುರುತಿಸಲ್ಪಡುತ್ತಿರುವ ಮೈಸೂರು ಪ್ರಜಾಪ್ರತಿನಿಧಿ ಸಭೆಯಂತಹ ರಾಜಕೀಯ ಸಂಸ್ಥೆಗಳ ಉಗಮ ಮತ್ತು ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪ್ರಮುಖ ಅಂಶಗಳು ಕಂಡುಬರುತ್ತವೆ.

೧೭೯೯ರ ನಂತರ ಮೈಸೂರನ್ನು ಒಡೆಯರ ಮನೆತನದ ಉಸ್ತುವಾರಿಗೆ ವಹಿಸುವಾಗ ಬ್ರಿಟಿಷರಿಗೆ ಮುಖ್ಯವಾಗಿ ಭೂಕಂದಾಯವನ್ನು ವ್ಯವಸ್ಥಿತವಾಗಿ ವಸೂಲಿ ಮಾಡಿಕೊಡುವ ಆಡಳಿತವನ್ನು ರೂಪಿಸುವುದು, ಈ ಉದ್ದೇಶಕ್ಕೆ ಬೆಂಬಲ ಕೊಡುವ ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳುವ ಜವಾಬ್ದಾರಿ ಮಾತ್ರ ಮಹಾರಾಜರ ಅಧಿಕಾರದ ಪರಿಮಿತಿಯಾಗಿರಬೇಕಾದ್ದು ಅವರಿಗೆ ಅಗತ್ಯವಾಗಿತ್ತು. ಮಹಾರಾಜರ ಅಧಿಕಾರ ಈ ಮಿತಿಯೊಳಗಿರುವಂತೆ ನೋಡಿಕೊಳ್ಳಲು ಸ್ವಲ್ಪಮಟ್ಟಿನ ಪ್ರಜಾಪ್ರಭುತ್ವ ಆಡಳಿತದ ಪ್ರಯೋಗಕ್ಕೆ ಅವರ ಅನುಮತಿ ಇತ್ತೇ ಹೊರತು ಜನರ ಹಿತಾಸಕ್ತಿಯನ್ನು ರಕ್ಷಿಸುವ ಪ್ರಜಾಪ್ರಭುತ್ವ ರಾಜಕೀಯ ಸಂಸ್ಥೆಯನ್ನು ಹುಟ್ಟುಹಾಕುವುದಕ್ಕಲ್ಲ.

ಪ್ರಜಾಪ್ರಭುತ್ವ ಎಂಬ ಆಡಳಿತವು ಪಶ್ಚಿಮದ ರಾಜಕೀಯ ಸಂದರ್ಭದಲ್ಲಿ ಜನನವಾದಂತದ್ದು. ಇದು ಜನಪ್ರಭುತ್ವಕ್ಕೆ ಸೂಚಿಸಿರುವ ಪದವಾಗಿ ರೂಪಿಸಲ್ಪಟ್ಟಿದೆ. ಇದನ್ನು ಅಬ್ರಾಂ ಲಿಂಕನ್‌ನ್ನು 'ಜನರೇ, ಜನರಿಗಾಗಿ, ಜನರಿಂದ, ರಚಿಸಿಕೊಳ್ಳುವ ಆಡಳಿತ ವ್ಯವಸ್ಥೆಯೆಂದು' ವ್ಯಾಖ್ಯಾನಿಸಿದ್ದಾನೆ. ಇಂತಹ ಆಡಳಿತ ವ್ಯವಸ್ಥೆಯನ್ನು ಮೈಸೂರು ಜನತೆ ಪಡೆಯಲು ಅನೇಕ ಕಷ್ಟ ಕಾರ್ಪಣ್ಯಗಳನ್ನು ಎದುರಿಸಿದರು. ಪ್ರಾಯೋಗಿಕ ಪ್ರತಿನಿಧಿ ಸಭೆಯು ಮುಂದುವರೆದು ಪ್ರಜಾಪ್ರಭುತ್ವಕ್ಕೆ ವೇದಿಕೆಯಾಯಿತು. ೧೯೩೮ರಲ್ಲಿ ಸ್ಥಾಪನೆಯಾದ ಮೈಸೂರು ಕಾಂಗ್ರೆಸ್ ಸಂಸ್ಥೆ ಎಲ್ಲ ರಾಜಕೀಯ ಬಣಗಳನ್ನು ಒಳಗೊಂಡಿದ್ದ ಬಲಿಷ್ಟ ಸಂಸ್ಥೆಯಾಗಿ ನಿರಂಕುಶ ಪ್ರಭುತ್ವವನ್ನು ದಮನ ಮಾಡುವ ಕಾರ್ಯಾಚರಣೆಯಲ್ಲಿ ತೊಡಗಿತು.

ಮೈಸೂರು ಸಂಸ್ಥಾನಿ ಜನರು ಪ್ರಜಾಪ್ರಭುತ್ವ ರಾಜ್ಯವನ್ನಾಗಿಸಲು ಅನೇಕ ರೀತಿಯ ಹೋರಾಟದಲ್ಲಿ ಪಾಲ್ಗೊಂಡಿದ್ದರು. ರಾಜರ ವಿರುದ್ಧ ಅನೇಕ ಸತ್ಯಾಗ್ರಹ, ಚಳವಳಿಗಳನ್ನು ಮಾಡಲು ಮುಂದಾದರು. ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷ್ ನೆಲೆಯಲ್ಲಿ ನಿರಂಕುಶ ರಾಜಪ್ರಭುತ್ವವು ಇದ್ದಿತು. ರಾಜಪ್ರಭುತ್ವವು ಮಧ್ಯಮ ವರ್ಗದ ಜನರ ಚಳವಳಿಯಿಂದ ಅವನತಿಯತ್ತ ಸಾಗಿತು. ಕಾರ್ಲ್‌ಮಾರ್ಕ್ಸ್ ಮತ್ತು ಎಂಗೆಲ್ಸ್‌ರ ಪ್ರಕಾರ "ನಿರಂಕುಶ ಪ್ರಭುತ್ವ ಒಂದು ರಾಜಕೀಯ ಪದ್ಧತಿ ಅಥವಾ ಬಂಡವಾಳದ ಪ್ರಾಬಲತೆ".[೪] ರಾಜಪ್ರಭುತ್ವದ ಅಧಿಕಾರದ ಸ್ವರೂಪವನ್ನು ಗಮನಿಸಿ ನಿರಂಕುಶ, ಉದಾರವಾದಿ ಹಾಗೂ ಪ್ರಜ್ಞಾವಂತ ಎಂಬುದಾಗಿ ಸರ್ಕಾರದ ವಿವಿಧ ಮಾದರಿಗಳನ್ನು ಕಾಣಬಹುದಾಗಿದೆ.

೧೯೪೭ರ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ, ಮೈಸೂರು ಸಂಸ್ಥಾನದಲ್ಲಿ ರಾಜಪ್ರಭುತ್ವವೇ ಉಳಿದು, ಅಧಿಕಾರ ಲಾಲಸೆಯನ್ನು ಎತ್ತಿತೋರಿಸುತ್ತಿತ್ತು. ಹಿಂದಿನಿಂದಲೂ ರಾಜಶಾಹಿ ಪ್ರಭುತ್ವವನ್ನು ಪ್ರಶ್ನಿಸುತ್ತಾ ಬಂದ ಮೈಸೂರು ಜನತೆ ಜವಾಬ್ದಾರಿ ಸರ್ಕಾರ ರಚನೆಗೆ ಒಂದು ಚಳವಳಿಯನ್ನು ಹಮ್ಮಿಕೊಂಡಿತು. ಅದು, ಮೈಸೂರು ಚಲೋ ಚಳವಳಿ. ಈ ಚಳವಳಿಯು ರಾಜಪ್ರಭುತ್ವವನ್ನು ಬಲಯುತವಾಗಿ ಪ್ರಶ್ನಿಸಿತು. ರಾಜನನ್ನು

ರಾಜಸತ್ತೆಯಿಂದ ಕೆಳಗಿಳಿಸಲು ಮತ್ತು ಅವನ ಅಧಿಕಾರವನ್ನು ಮೊಟಕುಗೊಳಿಸಲು ಪ್ರಯತ್ನಿಸಿದರು. ಈ ಜನಪ್ರಭುತ್ವದಲ್ಲಿ ವರ್ಗ, ಭಾಷೆ, ಬುಡಕಟ್ಟು, ಸಂತತಿ, ಜಾತಿಗಳಂಥ ಅಂಶಗಳ ಭೇಧವಿಲ್ಲದೆ ಪ್ರಜೆಗಳೆಲ್ಲರೂ ಸಮಾನರು ಎಂಬ ನೀತಿಯನ್ನು ಅಳವಡಿಸಿಕೊಂಡಿದ್ದರು. ಈ ಪ್ರಜಾಪ್ರಭುತ್ವ ವ್ಯವಸ್ಥೆಯು ಜನರನ್ನು ಸಮರ್ಥವಾಗಿ ಪ್ರತಿನಿಧಿಸುವಂತದ್ದು. ರಾಜಪ್ರಭುತ್ವವು ಮೈಸೂರು ಸಂಸ್ಥಾನದಲ್ಲಿ ಉಗಮದಿಂದ ಕೊನೆಯವರೆಗೂ ವಿರೋಧಗಳನ್ನು ಎದುರಿಸುತ್ತಲೇ ಇತ್ತು. ಕೊನೆಗೆ ಜನತೆಯು ಹಮ್ಮಿಕೊಂಡಿದ್ದ ಚಳವಳಿಯಿಂದ ರಾಜಪ್ರಭುತ್ವವು ನಿರ್ನಾಮವಾಗಿ ಪ್ರಜಾಪ್ರಭುತ್ವವು ಮೈಸೂರಿನಲ್ಲಿ ಸ್ಥಾಪಿತವಾಯಿತು. ಆಧುನಿಕ ಪ್ರಜಾಪ್ರಭುತ್ವವು ಪ್ರಾತಿನಿಧಿಕ ತತ್ವವನ್ನು ಆಧರಿಸಿದೆ. ಈ ತರಹದ ಒಂದು ಪದ್ಧತಿಯಲ್ಲಿ ಜನರು ತಮ್ಮ ಅಧಿಕಾರವನ್ನು ತಮ್ಮನ್ನು ಪ್ರತಿನಿಧಿಸುವ ಪ್ರಜಾಪ್ರತಿನಿಧಿಗಳಿಗೆ ನಿಗದಿತ ಸಮಯಾವಧಿಗೆಂದು ಸೀಮಿತಗೊಳಿಸಲಾಗಿದೆ. ಸ್ವಾತಂತ್ರ್ಯಾನಂತರ ಪ್ರಜೆಗಳಿಗೆ ಲಭಿಸಿದ ರಾಜಕೀಯ ಸ್ವಾತಂತ್ರ್ಯ ತಮಗೆ ಬೇಕಾದ ಪ್ರಭುತ್ವವನ್ನು ಆರಿಸುವ ಹಾಗೂ ಅಧಿಕಾರಕ್ಕೆ ತರುವ ಹಕ್ಕನ್ನು ನೀಡಿತು. ಇದು ಯಾವ ಸ್ವರೂಪದ ರಾಜಪ್ರಭುತ್ವದಲ್ಲಾದರೂ ಸಾಧ್ಯವಿರಲಿಲ್ಲ.

### ೫.೨ ಕೆ.ಸಿ ರೆಡ್ಡಿ ನೇತೃತ್ವದ ಮಂತ್ರಿಮಂಡಲ ರಚನೆ

ಅಕ್ಟೋಬರ್ ೨೪ ಸಂಸ್ಥಾನದ ಇತಿಹಾಸದಲ್ಲಿ ಸ್ಮರಣೀಯವಾದ ದಿವಸ, ಪ್ರಜಾನುರಾಗಕ್ಕೆ ಪಾತ್ರರಾದ ರಾಷ್ಟ್ರ ನಾಯಕರು ಸಂಸ್ಥಾನದ ಆಡಳಿತ ಸೂತ್ರಗಳನ್ನು ವಹಿಸಿಕೊಂಡು, ಸಂಪೂರ್ಣ ಪ್ರಜಾಪ್ರಭುತ್ವಕ್ಕೆ ಶಂಕುಸ್ಥಾಪನೆಯನ್ನು ಮಾಡಲು ಸೂಕ್ತ ಕಾರ್ಯಕ್ರಮಗಳನ್ನು ಕೈಗೊಂಡ ದಿನ. ಇಂತಹ ಸಮಯದ ಆಗಮನವನ್ನು ಸಂಸ್ಥಾನದ ಪ್ರಜೆಗಳು ಬಹುಕಾಲದಿಂದಲೂ ಕುತೂಹಲದಿಂದ ನಿರೀಕ್ಷಿಸಿಕೊಂಡಿದ್ದರು. ಅದಕ್ಕಾಗಿ ಅಪಾರ ಕಷ್ಟನಷ್ಟಗಳನ್ನು ಅನುಭವಿಸಿದ್ದರು. ಅದರ ಫಲವಾಗಿ ಅಂದು ಪ್ರಜಾವರ್ಗದವರ ಹಕ್ಕಾದ ಜವಾಬ್ದಾರಿ ಸರ್ಕಾರವನ್ನು ಗಳಿಸಿದರು. ರಾಜಕೀಯ ಜೀವನದ ಉನ್ನತ ಧ್ಯೇಯವಾದ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಪ್ರಜೆಗಳು ಸಹಕರಿಸಿದ್ದರ ಪರಿಣಾಮವಾಗಿ ೧೯೪೭ರ ಅಕ್ಟೋಬರ್ ೨೪ರಂದು ಮಧ್ಯಾಹ್ನ ಹೊಸ ಮಂತ್ರಿಮಂಡಲ ಸದಸ್ಯರು ಅಠಾರಾ ಕಛೇರಿಯಲ್ಲಿ ಅಧಿಕಾರವನ್ನು ವಹಿಸಿಕೊಂಡರು.[೫]

ಮೈಸೂರು ಚಲೋ ಚಳವಳಿ ಯಶಸ್ವಿಯಾಗಿ ಜವಾಬ್ದಾರಿ ಸರ್ಕಾರವನ್ನು ರಾಜ್ಯಕ್ಕೆ ತಂದುಕೊಟ್ಟ ಫಲವಾಗಿ, ಮೊದಲನೆ ಮಂತ್ರಿ ಮಂಡಲದಲ್ಲಿ ಒಂಬತ್ತು ಮಂದಿ ಶಾಸಕರು ಮಂತ್ರಿಗಳಾದರು. ಅವರಲ್ಲಿ ಆರು ಮಂದಿ ಕಾಂಗ್ರೆಸ್ ಮಂತ್ರಿಗಳು, ಮೂರು ಮಂದಿ

ಕಾಂಗ್ರೆಸ್ಸೇತರ ಮಂತ್ರಿಗಳು. ೧೯೪೭ರ ಅಕ್ಟೋಬರ್ ೨೯ರಂದು ಹೊಸ ಮಂತ್ರಿಗಳು ಬೆಳಿಗ್ಗೆ ೧೧ ಘಂಟೆಗೆ ಅರಮನೆಯ ಅಂಬಾವಿಲಾಸದಲ್ಲಿ ಮಹಾರಾಜರ ಸಮ್ಮುಖದಲ್ಲಿ ಪ್ರಮಾಣ ವಚನ ಸ್ವೀಕರಿಸಿದರು.[೬] ಅಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಾದ ವೇದವ್ಯಾಸಾಚಾರ್ಯರು ಮಂತ್ರಿಗಳನ್ನು ಒಬ್ಬೊಬ್ಬರನ್ನಾಗಿ ಪ್ರಭುಗಳ ಸನ್ನಿಧಿಗೆ ಕರೆದುಕೊಂಡು ಹೋದರು. ಮಂತ್ರಿಗಳು ಆಂಗ್ಲ ಭಾಷೆಯಲ್ಲಿ ಪ್ರಮಾಣ ವಚನವನ್ನು ಸ್ವೀಕರಿಸಿದರು. ಆ ಪ್ರಮಾಣ ವಚನವು ಈ ರೀತಿ ಇದೆ,

"ಶ್ರೀ ಮನ್ಮಮಹಾರಾಜರಲ್ಲಿ ರಾಜಭಕ್ತಿಯನ್ನು ಸೂಚಿಸಿ, ಅವರಲ್ಲಿಯೂ, ಅವರ ಆಡಳಿತದಲ್ಲಿಯೂ ಮತ್ತು ಪ್ರಜಾಕೋಟಿಯಲ್ಲೂ, ಸಂಪೂರ್ಣ ಶ್ರದ್ಧಾಭಕ್ತಿಗಳನ್ನಿಟ್ಟು ಸ್ವಾರ್ಥ ಅಥವಾ ಪಂಗಡಗಳ ಹಿತವನ್ನು ಲಕ್ಷಿಸದೆ ಸಂಸ್ಥಾನದ ಸೇವೆಗಾಗಿ ಬದ್ಧಕಂಕಣರಾಗಿರುವುದಾಗಿಯೂ ಮತ್ತು ತಮಗೆ ವಹಿಸುವ ಅಂತರಂಗದ ವಿಷಯಗಳನ್ನು ರಹಸ್ಯವಾಗಿ ಇಡುವುದಾಗಿಯೂ ಮತ್ತು ಆತ್ಮಸಾಕ್ಷಿಗೆ ಅನುಗುಣವಾಗಿ ಪ್ರಭುಗಳ ನಿಜವಾದ ಸೇವಕರಂತೆ ನಡೆದುಕೊಳ್ಳುವುದಾಗಿಯೂ" ಸಚಿವರು ತಮ್ಮ ಪ್ರಮಾಣವಚನದಲ್ಲಿ ಘೋಷಿಸಿದರು. ಅಂದು ಸುಮಾರು ೨೦೦ ಜನ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

೧೯೪೭ರ ಅಕ್ಟೋಬರ್ ೨೪ರಂದು ಮೈಸೂರು ರಾಜ್ಯಪತ್ರದ ವಿಶೇಷ ಸಂಚಿಕೆ ಪ್ರಕಟವಾಗಿ, ನೂತನ ಮಂತ್ರಿಗಳ ಹೆಸರುಗಳನ್ನು ಘೋಷಿಸಿತು. ಅದರಂತೆ ಕಾಂಗ್ರೆಸ್ ಮಂತ್ರಿಗಳು ೬ ಜನ.

| | | |
|---|---|---|
| ೧. ಕೆ.ಸಿ. ರೆಡ್ಡಿ | – | ಮುಖ್ಯಮಂತ್ರಿ, ಆಹಾರ ಮತ್ತು ರೆವಿನ್ಯೂ ಖಾತೆ |
| ೨. ಹೆಚ್.ಸಿ. ದಾಸಪ್ಪ | – | ವ್ಯವಸಾಯ ಖಾತೆ |
| ೩. ಕೆ.ಟಿ. ಭಾಷ್ಯಂ | – | ಗೃಹ ಖಾತೆ |
| ೪. ಹೆಚ್. ಸಿದ್ದಯ್ಯ | – | ಆರೋಗ್ಯ |
| ೫. ಟಿ. ಮರಿಯಪ್ಪ | – | ರೈಲ್ವೆ ಮತ್ತು ಕಾರ್ಮಿಕ ಖಾತೆ |
| ೬. ಆರ್. ಚನ್ನಿಗರಾಮಯ್ಯ | – | ಗ್ರಾಮಾಭಿವೃದ್ಧಿ ಖಾತೆ |

ಕಾಂಗ್ರೆಸ್ಸೇತರ ಮಂತ್ರಿಗಳು

| | | |
|---|---|---|
| ೭. ಪಾಮಡಿ ಸುಬ್ಬರಾಮಶೆಟ್ಟಿ | – | ಕೈಗಾರಿಕೆ ಮತ್ತು ವ್ಯಾಪಾರ ಖಾತೆ |
| ೮. ಮಹಮ್ಮದ್ ಷರೀಫ್ | – | ಹಣಕಾಸು |
| ೯. ಡಿ.ಹೆಚ್. ಚಂದ್ರಶೇಖರಯ್ಯ | – | ವಿದ್ಯಾಭ್ಯಾಸ |

ಈ ನೂತನ ಮಂತ್ರಿಮಂಡಲವು ಅಧಿಕಾರ ಸ್ವೀಕಾರ ಮಾಡಿದ ಮೇಲೂ ಎರಡು ವರ್ಷ ಕಾಲ ದಿವಾನ ಪದವಿ ಮುಂದುವರಿಯಿತು. ಅದುವರೆಗೂ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರು ಆಗಸ್ಟ್ ೧೯೪೯ರಲ್ಲಿ ನಿವೃತ್ತರಾದರು. ದಿವಾನರ ಕಾರ್ಯಗಳನ್ನು ಮುಖ್ಯಮಂತ್ರಿಗಳು ವಹಿಸಿಕೊಂಡರು.

ಪೂರ್ಣ ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಮೈಸೂರು ಸಂಸ್ಥಾನಕ್ಕೆ ಪ್ರತ್ಯೇಕ ರಾಜ್ಯಾಂಗವನ್ನು ಸಿದ್ಧಪಡಿಸಲು ಒಂದು ರಾಜ್ಯಾಂಗ ಸಭೆಯನ್ನು ರಚಿಸಬೇಕೆಂದು ದಿವಾನರಿಗೂ, ಮುಖ್ಯಮಂತ್ರಿಗಳಿಗೂ ಒಪ್ಪಂದವಾಗಿತ್ತು. ನೂತನ ರಾಜ್ಯಾಂಗವು ದಿನಾಂಕ ೧-೭-೧೯೪೮ರಲ್ಲಿ ಅಸ್ತಿತ್ವಕ್ಕೆ ಬರಬೇಕಾಗಿದ್ದಿತು. ರಾಜ್ಯಾಂಗ ಸಭೆಯು ೧೯೪೦ನೆಯ ಇಸವಿಯ ಶಾಸನದಂತೆ ೭೯ ಜನ ಚುನಾಯಿತ ಸದಸ್ಯರಿಂದ ಕೂಡಿರಬೇಕೆಂದು ತೀರ್ಮಾನಿಸಲಾಗಿತ್ತು. ಈ ಸಭೆಗೆ ಮಾರ್ಚ್ ೧೯೪೮ರಲ್ಲಿ ಚುನಾವಣೆ ನಡೆಯಿತು ೭-೪-೧೯೪೮ರಲ್ಲಿ ನೂತನ ರಾಜ್ಯಾಂಗ ಸಭೆಯ ಪ್ರಥಮಾಧಿವೇಶನ ನಡೆದು, ಟಿ. ಸುಬ್ರಹ್ಮಣ್ಯಂರವರು ರಾಜ್ಯಾಂಗ ಸಭೆಯ ಅಧ್ಯಕ್ಷರಾದರು. ಆದರೆ ಜುಲೈ ೧೯೪೮ರೊಳಗಿನ ರಾಜ್ಯಾಂಗ ಸಭೆ ತನ್ನ ಕಾರ್ಯಕಲಾಪಗಳನ್ನು ಪೂರ್ಣಗೊಳಿಸಲು ಸಮರ್ಥವಾಗದ ಕಾರಣ, ಕಾಲಾವಧಿಯನ್ನು ಮುಂದೂಡಿದರು. ಈ ನಡುವೆ ರಾಜ್ಯಾಂಗ ರಚನೆಯ ಕೆಲಸವನ್ನು ಕೇಂದ್ರದ ಮಾರ್ಗದರ್ಶನವಿಲ್ಲದೇ, ಪೂರ್ಣವಾಗಿ ಸ್ಥಳೀಯ ರಾಜ್ಯಾಂಗ ಸಭೆಗಳಿಗೆ ಬಿಟ್ಟು ಕೊಡುವುದು ಸೂಕ್ತವಲ್ಲವೆಂದೂ, ಅದು ಮುಂದಿನ ದಿನಗಳಲ್ಲಿ ತೊಡಕಾಗಬಹುದೆಂದೂ ಭಾರತ ಸರ್ಕಾರವು ಭಾವಿಸಿತು. ಇದರಿಂದ ಕೇಂದ್ರ ಸರ್ಕಾರದ ರಾಜ್ಯ ಮಂತ್ರಾಲಯವು ಎಲ್ಲ ದೇಶೀಯ ಸಂಸ್ಥಾನಗಳಿಗೂ ಅನ್ವಯಿಸುವ ಒಂದು ಮಾದರಿ ರಾಜ್ಯಾಂಗವನ್ನು ಸಿದ್ದಪಡಿಸಲು ಬಿ.ಎನ್. ರಾಯರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿ, ಆ ಸಮಿತಿ ಸಿದ್ದಪಡಿಸುವ ರಾಜ್ಯಾಂಗದ ಪ್ರಾರೂಪ ಬರುವವರೆಗೆ ಮೈಸೂರು ರಾಜ್ಯಾಂಗ ಸಭೆಯು ತನ್ನ ಕಾರ್ಯಕಲಾಪಗಳನ್ನು ತಡೆ ಹಿಡಿಯುವಂತೆ ಹೇಳಿಕೆ ನೀಡಿತು. ಈ ರಾಜ್ಯಾಂಗ ಪ್ರಾರೂಪವು ಮೇ ೧೯೪೯ರಲ್ಲಿ ನಡೆದ ಮುಖ್ಯ ಮಂತ್ರಿಗಳ ಸಭೆಯಲ್ಲಿ ಚರ್ಚಿತವಾಯಿತು.[೨]

ಭಾರತೀಯ ಸಂಸ್ಥಾನಗಳಿಗೆ ಪ್ರತ್ಯೇಕ ರಾಜ್ಯಾಂಗ ರಚನೆ ಅನವಶ್ಯಕವೆಂದು, ಸಮಗ್ರ ಭಾರತಕ್ಕೆ ಸಿದ್ಧವಾಗುವ ಸಂವಿಧಾನವೇ ಸೂಕ್ತವಾದ ಮಾರ್ಪಾಡುಗಳೊಡನೆ ಸಂಸ್ಥಾನಗಳಿಗೂ ಅನ್ವಯಿಸಬೇಕೆಂದೂ, ಆ ಸಭೆಯಲ್ಲಿ ತೀರ್ಮಾನಿಸಲಾಯಿತು. ಸಂವಿಧಾನ ಪ್ರಾರೂಪವು ಸೆಪ್ಟೆಂಬರ್ ೧೯೪೯ರಲ್ಲಿ ಎಲ್ಲ ಸಂಸ್ಥಾನಗಳಿಗೂ ಕಳುಹಿಸಲ್ಪಟ್ಟಿತು. ಆಗ ಮೈಸೂರು ಸಂಸ್ಥಾನವು ಅದಕ್ಕೆ ಕೆಲವಾರು ಮಾರ್ಪಾಡುಗಳನ್ನು ಸೂಚಿಸಿತು. ಸಂಸ್ಥಾನಗಳ ಆಡಳಿತದ ಮೇಲ್ವಿಚಾರಣೆ ನೋಡಿಕೊಳ್ಳಲು ಸಂವಿಧಾನ ಪ್ರಾರೂಪದ ೩೭೧ನೆಯ ನಿಯಮವು ಕೇಂದ್ರ ಸರ್ಕಾರಕ್ಕೆ ಅಧಿಕಾರ ನೀಡಿತ್ತು. ಈ ನಿಯಮವನ್ನು ಮೈಸೂರು ರಾಜ್ಯಾಂಗ ಸಭೆ ವಿರೋಧಿಸಿತು. ಭಾರತದ

ನೂತನ ಸಂವಿಧಾನವು ಮೈಸೂರಿಗೂ ಅನ್ವಯಿಸುವುದೆಂದು ದಿನಾಂಕ ೨೬-೧-೧೯೫೦ರಂದು ಮೈಸೂರು ರಾಜಪ್ರಮುಖರು ಘೋಷಣೆ ಹೊರಡಿಸಿದರು.[೮] ಭಾರತದ ಬೇರೆ ಕಡೆಗಳಂತೆ ಮೈಸೂರಿನಲ್ಲೂ ಪ್ರಜಾಸತ್ತಾತ್ಮಕ ಸರ್ಕಾರ ಸ್ಥಾಪನೆಗೆ ಈ ನೂತನ ಸಂವಿಧಾನವು ಅವಕಾಶ ನೀಡಿದ್ದಿತು. ಮಹಾರಾಜರು ಮೈಸೂರಿನ ಮುಖ್ಯರಾದರು. ಆ ವೇಳೆಗಾಗಲೇ ಹಿಂದಿನ ಪ್ರಜಾಪ್ರತಿನಿಧಿ ಸಭೆಯ ಮತ್ತು ನ್ಯಾಯವಿಧಾಯಕ ಸಭೆಯ ಅಧಿಕಾರವಧಿ ಮುಗಿದಿದ್ದರಿಂದ, ಅವೆರಡೂ ಸಭೆಗಳು ವಿಘಟಿತವಾದವು. ರಾಜ್ಯಾಂಗ ಸಭೆಯೇ ನ್ಯಾಯವಿಧಾಯಕ ಸಭೆಯಾಗಿ ಪರಿವರ್ತಿತವಾಗಿ, ವಯಸ್ಕ ಮತದಾನಾಧಾರದ ಮೇಲೆ ನೂತನ ಶಾಸನ ಸಭೆಗಳು ರಚಿತವಾಗುವವರೆಗೂ ಅದು ಶಾಸನ ಕಾರ್ಯಕಲಾಪಗಳನ್ನು ನಿರ್ವಹಿಸಬೇಕೆಂದು ತೀರ್ಮಾನಿಸಲಾಯಿತು. ಹಿಂದಿನ ತಾತ್ಕಾಲಿಕ ಮಂತ್ರಿಮಂಡಲ ರಾಜೀನಾಮೆ ನೀಡಿ, ಹೊಸ ಮಂತ್ರಿ ಮಂಡಲ ರಚಿತವಾಯಿತು. ನೂತನ ಮಂತ್ರಿ ಮಂಡಲದಲ್ಲಿಯೂ ಕೆ.ಸಿ. ರೆಡ್ಡಿಯವರೇ ಮುಖ್ಯಮಂತ್ರಿಗಳಾದರು. ಹೀಗೆ ಮೈಸೂರಿನಲ್ಲಿ ಜನಪ್ರಿಯ ಸರ್ಕಾರ ಸ್ಥಾಪಿತವಾಗಿ ಭಾರತದಲ್ಲಿಯೇ ರಾಜ್ಯಾಂಗ ವ್ಯವಸ್ಥೆ ಒಂದು ಸ್ಪಷ್ಟ ಚಿತ್ರಣ ಪಡೆಯಿತು.

### ೫.೩ ಹೊಸ ಸವಾಲುಗಳು

ಕೆ.ಸಿ. ರೆಡ್ಡಿಯವರಿಂದೊಡಗೂಡಿದ ಮಂತ್ರಿಮಂಡಲ ರಚನೆಯ ನಂತರ ಮೈಸೂರು ಸಂಸ್ಥಾನದಲ್ಲಿದ್ದ ಅನೇಕ ಸಮಸ್ಯೆ, ಸವಾಲುಗಳು, ಇವರ ಜವಾಬ್ದಾರಿಗೆ ಬಂದವು. ರಾಜ ಪ್ರಭುತ್ವದಿಂದ ಜನಪ್ರಭುತ್ವಕ್ಕೆ ಆಡಳಿತ ಚುಕ್ಕಾಣಿ ಬಂದ ಮೇಲೆ ಜನರ ಸಮಸ್ಯೆಗಳನ್ನು ಈ ಮಂತ್ರಿಮಂಡಲ ನೆರವೇರಿಸಲು ಮುಂದಾಯಿತು. ಬ್ರಿಟಿಷ್ ವಸಾಹತುಶಾಹಿಯ ಹಿತಾಸಕ್ತಿಗೆ ಹಿನ್ನೆಲೆಯಾಗಿ ರೂಪಗೊಂಡಿದ್ದ ಮೈಸೂರು ಸಂಸ್ಥಾನ ಆಡಳಿತದ ದೃಷ್ಟಿಯಿಂದ ಅನೇಕ ಪ್ರಾಂತ್ಯಗಳಾಗಿ ವಿಂಗಡಣೆಗೊಂಡಿತ್ತು. ಇಲ್ಲಿ ಪ್ರಮುಖವಾಗಿ ತೆರೆಗೆ ಬಂದ ಸಮಸ್ಯೆಯೆಂದರೆ ಭಾಷಾವಾರು ಪ್ರಾಂತ ವಿಂಗಡಣೆ. ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳವಳಿಯ ಹಾಗೂ ಜವಾಬ್ದಾರಿ ಸರ್ಕಾರ ರಚನೆಯ ಜೊತೆ ಜೊತೆಗೆ ಏಕೀಕೃತ ಕರ್ನಾಟಕವನ್ನು ನಿರ್ಮಿಸಲು ಕೆಲಸ ನಿರ್ವಹಿಸತೊಡಗಿದ್ದರು.

ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ರಚಿತವಾದ ನಂತರ ಮೊದಲ ಮುಖ್ಯಮಂತ್ರಿಯಾಗಿದ್ದ ಕೆ.ಸಿ. ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ೬-೧೧-೧೯೪೮ರಂದು ಬೀರೂರಿನಲ್ಲಿ ಅಖಿಲ ಮೈಸೂರು ಕಾಂಗ್ರೆಸ್ ಅಧಿವೇಶನ ನಡೆಯಿತು. ಕೆ.ಸಿ ರೆಡ್ಡಿಯವರು ಮೈಸೂರು ರಾಜ್ಯ, ಕರ್ನಾಟಕದ ಪ್ರಾಂತ್ಯ ರಚನೆಗೆ ಅಡ್ಡಿಯಾಗುವುದಿಲ್ಲವೆಂದು ತಮ್ಮ ಭಾಷಣದಲ್ಲಿ ಸ್ಪಷ್ಟಪಡಿಸಿದರು. ಮಹಾರಾಜರ ಘಟನಾತ್ಮಕ ಆಳ್ವಿಕೆಯಲ್ಲೇ ಸಂಯುಕ್ತ ಕರ್ನಾಟಕದ ರಚನೆಯಾಗುವುದು ಅವಶ್ಯಕ ಮತ್ತು ಅನಿವಾರ್ಯ ಎಂಬ ಅಭಿಪ್ರಾಯವು ಅಧಿವೇಶನದಲ್ಲಿ ಸರ್ವಾನುಮತದ್ದಾಗಿತ್ತು.[೯] ಬೀರೂರಿನ ಅಧಿವೇಶನದ ಹೊತ್ತಿಗೆ ಭಾಷಾವಾರು

ಪ್ರಾಂತ ರಚನೆಗೆ ಸಂಬಂಧಿಸಿದುದೆ ಮಹತ್ವದ ಚಳವಳಿಗಳಾಗಿ, ಸಂವಿಧಾನ ರಚನಾ ಸಮಿತಿಯು ಧರ್ ಸಮಿತಿಯನ್ನು ನೇಮಿಸಿತ್ತು.

ಬ್ರಿಟಿಷರು ತಮ್ಮ ವಸಾಹತುಶಾಹಿಯ ನೀತಿಗೆ ಅನುಸಾರವಾಗಿ ಹಾಗೂ ಜನರಿಗೆ ಅರ್ಥವಾಗದ ಭಾಷೆಯಲ್ಲಿ ಆಡಳಿತ ನಡೆಸುವ ಉದ್ದೇಶದಿಂದ ಸೃಷ್ಟಿಸಿದ್ದ ಪ್ರಾಂತೀಯ ಘಟಕಗಳು ಸ್ವತಂತ್ರ ಭಾರತಕ್ಕೆ ತಕ್ಕ ಹಾಗಿರಲಿಲ್ಲ. ಭಾಷಾವಾರಾಗಿ ರಾಜ್ಯಗಳನ್ನು ಪುನಃ ರಚಿಸುವುದೊಂದು ತುರ್ತು ಹಾಗೂ ಮುಖ್ಯ ಕಾರ್ಯವಾಗಿ ಕೈಗೊಳ್ಳುವುದು ಅನಿವಾರ್ಯವಾಗಿತ್ತು. ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಡುತ್ತಿದ್ದ ಮೈಸೂರು ಪ್ರಜಾಸಂಯುಕ್ತ ಪಕ್ಷದವರು ಕಾಂಗ್ರೆಸ್ ನೀತಿಯನ್ನನುಸರಿಸಿ ಜನಾನುರಾಗಿಗಳಾಗಲು ಉತ್ಸುಕರಾಗಿ ಭಾಷಾವಾರು ಪ್ರಾಂತ್ಯ ರಚನೆಯ ಪರವಾಗಿ ಒಂದು ನಿರ್ಣಯವನ್ನು ೧೯೩೭ರಲ್ಲಿ ಅಂಗೀಕರಿಸಿದ್ದರು. ನಂತರ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷ ತಾತ್ಕಾಲಿಕ ಸರ್ಕಾರಗಳನ್ನು ೧೯೪೬ರಲ್ಲಿ ರಚಿಸಿ ಏಕೀಕರಣವನ್ನು ಬೆಂಬಲಿಸುವ ನಿಲುವು ತೆಗೆದುಕೊಂಡಿತು.[೧೦] ಸ್ವಾತಂತ್ರ್ಯ ಬಂದರೂ ರಾಜಶಾಹಿಯಿಂದ ಮುಕ್ತರಾಗುವ ಭರವಸೆ ಇರಲಿಲ್ಲ. ಈ ಹಿನ್ನೆಲೆಯಲ್ಲಿ ಪ್ರಥಮ ಬಾರಿಗೆ ಮೈಸೂರು ಸಂಸ್ಥಾನದ ದಾವಣಗೆರೆಯಲ್ಲಿ ೧೯೪೬ರಲ್ಲಿ ಏಕೀಕರಣ ಸಭೆ ನಡೆಯಿತು.

ಮೈಸೂರಿನ ಮುಖ್ಯಮಂತ್ರಿ ಕೆ.ಸಿ. ರೆಡ್ಡಿ, ಕರ್ನಾಟಕದ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಎಸ್. ನಿಜಲಿಂಗಪ್ಪ ಅವರುಗಳೊಂದಿಗೆ ದೆಹಲಿಗೆ ತೆರಳಿ ಧರ್‌ಸಮಿತಿಯ ಸದಸ್ಯರು, ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಗವರ್ನರ್ ಜನರಲ್ ಮುಂತಾದ ಮುಖಂಡರನ್ನಲ್ಲದೆ ಪಟ್ಟಾಭಿ ಸೀತಾರಾಮಯ್ಯ, ವಲ್ಲಭಭಾಯಿ ಪಟೇಲ್ ಅವರೂ ಸೇರಿದಂತೆ ಇನ್ನೂ ಹಲವು ಗಣ್ಯರನ್ನು ೨-೧೨-೧೯೪೮ರಿಂದ ೬-೧೨-೪೮ರ ಅವಧಿಯಲ್ಲಿ ಭೇಟಿಯಾಗಿ ಸಂಯುಕ್ತ ಕರ್ನಾಟಕ ಪ್ರಾಂತ ರಚನೆಯ ಅವಶ್ಯಕತೆ, ಅನುಕೂಲ ಇತ್ಯಾದಿಗಳನ್ನು ತಿಳಿಸಿದರು.[೧೧] ಆ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಮುಖಂಡರು ಕರ್ನಾಟಕ ಪ್ರಾಂತ ರಚನೆಯ ಬೇಡಿಕೆಯಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಂಡರು. ಹಾಗೂ ಹಲವಾರು ಮುಖಂಡರಲ್ಲಿ ಭಿನ್ನಾಭಿಪ್ರಾಯಗಳಿದ್ದುದು ಕಂಡುಬಂತು.

ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ರಚನೆಯೇ ಆಗಿಲ್ಲದಿದ್ದಾಗ ಮತ್ತು ಭಾರತಕ್ಕೆ ಸ್ವಾತಂತ್ರ್ಯವೇ ಇನ್ನೂ ಬಾರದಿದ್ದಾಗ ಭಾಷಾವಾರು ಪ್ರಾಂತ ರಚನೆ ಮತ್ತು ಆ ಮೂಲಕ ಕರ್ನಾಟಕ ಏಕೀಕರಣ ಬಹುದೂರದ ವಿಷಯವಾಗಿದೆ ಎಂಬ ಅಭಿಪ್ರಾಯವನ್ನು ಅನೇಕ ಧುರೀಣರು ಹೊಂದಿದ್ದರು. ಆದರೆ ಮೈಸೂರು ಕಾಂಗ್ರೆಸ್ ೧೯೪೬ರ ನವೆಂಬರ್‌ನಲ್ಲೇ ಬೆಂಗಳೂರಿನ ಸುಭಾಷ್ ನಗರದಲ್ಲಿ ನಡೆದ ವಾರ್ಷಿಕ ಸಭೆಯು ಬೇರೆ ಬೇರೆ ಆಡಳಿತದಲ್ಲಿ ಹರಿದು ಹಂಚಿ ಹೋಗಿದ್ದ ಭಾಗಗಳನ್ನೆಲ್ಲಾ ಒಗ್ಗೂಡಿಸಿ ಶೀಘ್ರವೇ ಕರ್ನಾಟಕ ರಚನೆಯು ಆಗಬೇಕೆಂದು ಒತ್ತಾಯಿಸುವ ಗೊತ್ತುವಳಿ ಸ್ವೀಕರಿಸಿತು. ಅಂತಹ ಏಕೀಕೃತ ಕರ್ನಾಟಕ ರಚನೆಗೆ

ಸದ್ಯಕ್ಕೆ ಮೈಸೂರು ಸಂಸ್ಥಾನದಲ್ಲಿರುವ ಅರಸೊತ್ತಿಗೆ ಆಳ್ವಿಕೆ ಅಡ್ಡಿಯಾಗಿರುವುದರ ಅರಿವಿದೆಯೆಂದು, ದಕ್ಷಿಣದ ಸಂಸ್ಥಾನಗಳು ತಮ್ಮ ಜನತೆಯ ಅಭಿಪ್ರಾಯಗಳನ್ನು ಗಮನಿಸದೆಯೇ ಒಕ್ಕೂಟವೊಂದನ್ನು ರಚಿಸಿಕೊಳ್ಳುವ ಆತುರದ ಪ್ರಯತ್ನಗಳನ್ನು ಮಾಡಿದ್ದು ಅವರ ನಿರಂಕುಶ ಧೋರಣೆಯಾಗಿದ್ದು, ಭಾಷಾವಾರು ಪ್ರಾಂತ ರಚನೆಯ ಸಂದರ್ಭದಲ್ಲಿ ಕರ್ನಾಟಕದ ಎಲ್ಲ ಜನರೂ ಕನ್ನಡಿಗರದೇ ಆದ ಪ್ರಾಂತ ರಚನೆಗೆ ಪೂರಕ ಸಹಕಾರ ಕೊಡಬೇಕೆಂದು ಮನವಿ ಮಾಡಿತು.[೧೨]

ಮೈಸೂರಿಗರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯೊಡನೆ ಹೋರಾಡಿ ತಮ್ಮ ಸಮಿತಿಗೆ ೧೯೪೭-೪೮ರಲ್ಲಿ ಅಧಿಕೃತ ಮಾನ್ಯತೆಗಳಿಸಿಕೊಂಡರು. ಮೈಸೂರಿಗರು ೧೯೩೭ರ ವರೆಗೂ ಏಕೀಕರಣದ ಬಗ್ಗೆ ಪ್ರತಿಕ್ರಿಯಿಸಲಿಲ್ಲ. ಆದರೆ ಬ್ರಿಟಿಷ್ ಭಾರತದಲ್ಲಿನ ಆಗಿನ ರಾಜಕೀಯ ಏಳಿಗೆಗಳು ಮೈಸೂರು ಸಂಸ್ಥಾನಿ ಜನರನ್ನು ಹೋರಾಡಲು ಪ್ರೇರೇಪಿಸಿದವು. ಏಕೀಕರಣದ ಬಗ್ಗೆ ಮುಂಬೈ ಮತ್ತು ಮದ್ರಾಸ್ ಪ್ರಾಂತ್ಯಗಳ ಕಾಂಗ್ರೆಸ್ ಘಟಕಗಳು ಮತ್ತು ಶಾಸನ ಸಭೆಗಳು ಒಂದು ತೀರ್ಮಾನಕ್ಕೆ ಬಂದು ಕೇಂದ್ರ ಸರ್ಕಾರದ ಮೇಲೆ ಒತ್ತಡ ತಂದರು, ಇದರ ಪ್ರಕಾರ ೧೯೪೮ರಲ್ಲಿ ಧರ್‌ಸಮಿತಿಯನ್ನು ರಾಜ್ಯಗಳ ಪುನರ್‌ವಿಂಗಡಣೆಯ ಕುರಿತು ವರದಿಯನ್ನು ಸಲ್ಲಿಸಲು ನೇಮಿಸಲಾಯಿತು. ಇತರ ಭಾಗಗಳಲ್ಲಿ ನಡೆಯುತ್ತಿದ್ದ ಭಾಷಾವಾರು ಪ್ರಾಂತ್ಯ ರಚನಾ ಚಳವಳಿ ರಾಜ್ಯಗಳ ಪುನರ್ ವಿಂಗಡಣೆಯನ್ನು ಮಾಡ ಬಯಸಿತು. ಆದರೆ ಮೈಸೂರಿನ ಬಹು ಸಂಖ್ಯಾತರು ಏಕೀಕರಣವನ್ನು ವಿರೋಧಿಸಿ ಕನ್ನಡ ಮಾತನಾಡುವ ಎರಡು ಪ್ರತ್ಯೇಕ ರಾಜ್ಯಗಳನ್ನು ರಚಿಸಬೇಕೆಂದು ಒತ್ತಾಯಿಸಿದರು.[೧೩] ಇದರ ಪ್ರಕಾರ ಮೈಸೂರು ರಾಜ್ಯ ಸಣ್ಣ ಪುಟ್ಟ ಬದಲಾವಣೆಗಳೊಂದಿಗೆ ತನ್ನ ಸ್ವರೂಪವನ್ನು ಹಾಗೆಯೇ ಉಳಿಸಿಕೊಳ್ಳುವುದು ಹಾಗೂ ಉಳಿದ ಪ್ರಾಂತ್ಯಗಳೆಲ್ಲಾ ಸೇರಿ ಒಂದು ಪ್ರತ್ಯೇಕ ರಾಜ್ಯವಾಗಬೇಕು ಎಂಬ ಸೂತ್ರವನ್ನು ಮಂಡಿಸಿದರು.

ಪ್ರಜಾಪ್ರಭುತ್ವವೆಂದರೆ ಪ್ರಜೆಗಳ ಆಡಳಿತ ಎನ್ನಲಾಗಿದೆ ಆದರೆ ಆಡಳಿತದ ಭಾಷೆ ಬೇರೆ, ಜನರ ಭಾಷೆಗಳು ಬೇರೆ ಬೇರೆ ಎಂದರೆ ಪ್ರಜಾಪ್ರಭುತ್ವವು ಕೇವಲ ಆಂಗ್ಲ ಭಾಷೆ ಬಲ್ಲವರ ಗುತ್ತಿಗೆಯಾಗುತ್ತದೆ. ಆದುದರಿಂದ ಭಾರತದಲ್ಲಿ ಭಾಷೆಯ ಆಧಾರದಲ್ಲಿ ರಾಜ್ಯಗಳ ರಚನೆ ಆಗಬೇಕೆಂದು ಸ್ವಾತಂತ್ರ್ಯ ಪೂರ್ವದಲ್ಲೇ ರಾಷ್ಟ್ರೀಯ ಕಾಂಗ್ರೆಸ್ ಅಭಿಪ್ರಾಯಪಟ್ಟಿತ್ತು.[೧೪] ಭಾಷಾವಾರು ರಾಜ್ಯಗಳ ರಚನೆ ಎಂದರೆ ಪ್ರಾಂತೀಯ ಆಡಳಿತಗಳ ಸರಹದ್ದುಗಳನ್ನು ಅಷ್ಟಿಷ್ಟು ಬದಲಾವಣೆ ಮಾಡುವ ಕೆಲಸವಾಗಿರಲಿಲ್ಲ. ಅದು ದೇಶದ ರಾಜಕೀಯ ಸಂರಚನೆಯನ್ನೇ ಮೂಲಭೂತವಾಗಿ ಬದಲಾವಣೆ ಮಾಡುವ ಕಾರ್ಯವಾಗಿತ್ತು. ಕಾಂಗ್ರೆಸ್ ಸಂಸ್ಥೆಯು ರಾಷ್ಟ್ರೀಯ ಚಳವಳಿಯ ಮುಖ್ಯವಾಹಿನಿಯಾಗಿದ್ದಾಗ ಭಾಷಾವಾರು ಪ್ರಾಂತಗಳ ಬೇಡಿಕೆಯ ಹಿಂದಿದ್ದ ಪ್ರಜಾಪ್ರಭುತ್ವವಾದಿ ತತ್ವವನ್ನು ಗುರುತಿಸಿತ್ತು.

೧೯೪೭ರ ಭಾರತ ಸ್ವಾತಂತ್ರ್ಯದ ಸಮಯದಲ್ಲಿ ನಮ್ಮ ಕನ್ನಡ ನಾಡು ಏಕೀಕರಣದ ಹಂತ ತಲುಪಿರಲಿಲ್ಲ ಮೈಸೂರು 'ಬಿ' ವರ್ಗಕ್ಕೆ ಸೇರಿದ್ದು, ದೇಶೀ ರಾಜರಾದ ಜಯಚಾಮರಾಜೇಂದ್ರ ಒಡೆಯರ್‌ರವರ ಆಳ್ವಿಕೆಗೆ ಒಳಪಟ್ಟಿತ್ತು. ಕೊಡಗು 'ಸಿ' ವರ್ಗದ ರಾಜ್ಯವಾಗಿತ್ತು. ಅದೇ ರೀತಿ ಬ್ರಿಟಿಷರ ನೇರ ಆಳ್ವಿಕೆಯ ಮದ್ರಾಸ್ ಪ್ರಾಂತ್ಯ ಹಾಗೂ ಮುಂಬೈ ಪ್ರಾಂತ್ಯಕ್ಕೆ ಕೆಲವು ಭಾಗಗಳು ಸೇರಿದ್ದು, ಹೈದರಾಬಾದ್ ನಿಜಾಮನ ಆಳ್ವಿಕೆಯಲ್ಲಿಯೂ ಪ್ರಚಲಿತ ಕರ್ನಾಟಕದ ಕೆಲವು ಜಿಲ್ಲೆಗಳು ಸೇರಿಕೊಂಡಿದ್ದವು.[೧೫] ಮುಂದೆ ೧೯೫೬ರ ನವೆಂಬರ್ ೧ರಂದು ಕನ್ನಡ ನಾಡಿನ ಏಕೀಕರಣದೊಂದಿಗೆ ಮೈಸೂರು ರಾಜ್ಯ ಉದಯವಾಯಿತು. ಭಾಷಾವಾರು ರಾಜ್ಯಗಳ ನಿರ್ಮಾಣದ ಪರಿಣಾಮವಾಗಿ ಆಶ್ರಿತ ಸಂಸ್ಥಾನಗಳು ಅಸ್ತಿತ್ವ ಕಳೆದುಕೊಂಡವು. ನಿರಂಕುಶ ಆಡಳಿತ ಇದ್ದಂತಹ ಪ್ರದೇಶಗಳು ಜನರ ಭಾಷೆ, ಸಂಸ್ಕೃತಿ ಮತ್ತು ಪ್ರಾದೇಶಿಕ ಸಂಪರ್ಕಗಳ ಆಧಾರದ ಮೇಲೆ ಭಾಷಾವಾರು ರಾಜ್ಯಗಳೊಳಗೆ ಸೇರಲ್ಪಟ್ಟವು. ಅಂದಿನ ಊಳಿಗಮಾನ್ಯ ಪ್ರಭುತ್ವಗಳ ಬದಲು ಹೊಸ ಪ್ರಜಾಪ್ರಭುತ್ವವಾದಿ ಆಡಳಿತಗಳು ರೂಪ ತಳೆದವು.

ಅದೇ ರೀತಿ ಆ ಸಂದರ್ಭದಲ್ಲಿದ್ದ ಸಾಮಾಜಿಕ ಸಮಸ್ಯೆಗಳಾದ ಆಹಾರ ಸಮಸ್ಯೆ, ಆರ್ಥಿಕ ಏರು ಪೇರುಗಳೂ ಸಹ ಪ್ರಮುಖವಾಗಿವೆ. ವಸಾಹತುಶಾಹಿ ಪ್ರಭುತ್ವಕ್ಕೆ ಸಿಲುಕಿದ ಮೈಸೂರು ಸಂಸ್ಥಾನ ಅನೇಕ ರೀತಿಯ ಸಂಕೋಲೆಗಳಿಂದ ಕೂಡಿತ್ತು. ಹೀಗೆ ಸಂಸ್ಥಾನದಲ್ಲಿ ಉಂಟಾಗಿದ್ದ ಭೀಕರ ಬರಗಾಲದಿಂದ ಸುಧಾರಿಸಿಕೊಳ್ಳಲು ಮೈಸೂರಿಗರು ಪರಿತಪಿಸುತ್ತಿದ್ದರು. ಮೈಸೂರು ಸಂಸ್ಥಾನವನ್ನು ಆರ್ಥಿಕವಾಗಿ ಬಲಹೀನರನ್ನಾಗಿಸಿದ ಬ್ರಿಟಿಷರು ಅನೇಕ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟರು. ಹಾಗೂ ಕೆ.ಸಿ. ರೆಡ್ಡಿಯವರ ಮಧ್ಯಂತರ ಸರ್ಕಾರದಲ್ಲಿ, ಮಂತ್ರಿಮಂಡಲ ರಚನೆಯ ಸಂದರ್ಭದಲ್ಲಿ ಮುಖ್ಯವಾಗಿ ೬ ಜನ ಕಾಂಗ್ರೆಸ್ ಹಾಗೂ ೩ ಜನ ಕಾಂಗ್ರೆಸ್ಸೇತರ ಮಂತ್ರಿಗಳನ್ನು ಕಾಣಬಹುದಾಗಿ, ಆಗ ಮಂತ್ರಿಮಂಡಲದಲ್ಲಿ ವರ್ಗ ಪ್ರಾತಿನಿಧ್ಯವನ್ನು ಪರಿಗಣಿಸಿ, ಎಲ್ಲ ಸಮುದಾಯದ, ವರ್ಗಗಳನ್ನು ಪರಿಗಣಿಸಿ ಮಂತ್ರಿಮಂಡಲವನ್ನು ರಚಿಸಲು ಮುಂದಾದರು.

ಮತ್ತೊಂದು ಪ್ರಮುಖವಾದ ಅಂಶವೆಂದರೆ ಜವಾಬ್ದಾರಿ ಸರ್ಕಾರ ರಚನೆಯಾದ ನಂತರ ಮೈಸೂರಿಗೆ ಒಂದು ಪ್ರತ್ಯೇಕ, ರಾಜಕೀಯ ಹಿತದೃಷ್ಟಿಯಿಂದ, ಹಾಗೂ ಆಡಳಿತದ ವ್ಯವಸ್ಥೆಯನ್ನು ಸುಗಮಗೊಳಿಸಲು ರಾಜ್ಯಾಂಗ ರಚಿಸಲು ಮುಂದಾದರು. ಆಗ ರಾಜ್ಯಾಂಗ ಸಭೆಯ ಅಧ್ಯಕ್ಷರನ್ನಾಗಿ ಟಿ. ಸುಬ್ರಹ್ಮಣ್ಯಂ ರವರನ್ನು ನೇಮಿಸಿದರು. ನಂತರ ಭಾರತ ಸರ್ಕಾರ ಸಂಸ್ಥಾನಗಳಿಗೆ ಪ್ರತ್ಯೇಕ ರಾಜ್ಯಾಂಗ ವ್ಯವಸ್ಥೆ ಅವಶ್ಯಕವಿಲ್ಲವೆಂದೂ, ಭಾರತಕ್ಕೆ ಸಿದ್ಧವಾಗುವ ಸಂವಿಧಾನವೇ ಸೂಕ್ತವಾದ ನಿಯಮಗಳೊಡನೆ ಸಂಸ್ಥಾನಗಳಿಗೂ ಅನ್ವಯಿಸುವಂತೆ ರಚಿಸಬೇಕೆಂದು ತೀರ್ಮಾನಿಸಿ ರಚಿಸಲಾಯಿತು.

ಹೀಗೆ ಇನ್ನೂ ಅನೇಕ ಸಮಸ್ಯೆಗಳು, ಸವಾಲುಗಳನ್ನು ಕೆ.ಸಿ. ರೆಡ್ಡಿ ನೇತೃತ್ವದ ಮಂತ್ರಿಮಂಡಲ ಎದುರಿಸಿತು. ಇವರು ೧೯೫೨ರ ವರೆಗೆ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದು, ನಂತರ ಕೇಂದ್ರ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದರು.

## ಕೊನೆಟಿಪ್ಪಣಿಗಳು

೧. ದಿವಾಕರ್ ಆರ್.ಆರ್ (ಸಂ.), **ಕರ್ನಾಟಕದ ಪರಂಪರೆ**, ಸಂಪುಟ–೨, ೨೦೦೬, ಪು. ३४२

೨. ಸದಾನಂದ ಜೆ.ಎಸ್., **ಅರಿವು–ಬರಹ**, ೧೯೯೩, ಪು. ೫೧

೩. ಅದೇ, ೫೨

೪. ತಂಬಂಡ ವಿಜಯ್ ಪೂಣಚ್ಚ., **ಚರಿತ್ರೆ ವಿಶ್ವಕೋಶ**, ೨೦೦೧, ಪು. ೪೦೮

೫. **ಸಾಧ್ವಿ ಪತ್ರಿಕೆ**, ಅಕ್ಟೋಬರ್ ೨೫, ೧೯೪೭

೬. ಅದೇ, ಅಕ್ಟೋಬರ್ ೩೦, ೧೯೪೭

೭. ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ ಎಂ., **ಕರ್ನಾಟಕ ಇತಿಹಾಸ ದರ್ಶನ**, ೧೯೭೦, ಪು. ೬೬೪

೮. ಅದೇ, ೬೬೫

೯. ಗೋಪಾಲರಾವ್ ಎಚ್.ಎಸ್., **ಕರ್ನಾಟಕ ಏಕೀಕರಣ ಇತಿಹಾಸ**, ಪು. ೧೪೫

೧೦. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು**, ಪು. ೯೫

೧೧. ಗೋಪಾಲರಾವ್ ಎಚ್.ಎಸ್., ಮೇಲಿನದೇ, ಪು. ೧೪೬

೧೨. ಗೋವಿಂದರಾಜು ಸಿ.ಆರ್., **ಕರ್ನಾಟಕ ಏಕೀಕರಣದ ಚಳವಳಿ ಮತ್ತು ಕನ್ನಡ ಸಾಹಿತ್ಯ**, ೧೯೯೮, ಪು. ೮೬

೧೩. ಅಕ್ಕಮಹಾದೇವಿ., **ಹೆಚ್.ಕೆ.ವೀರಣ್ಣ ಗೌಡ**, ೨೦೦೬, ಪು. ३४

೧೪. ರಂ. ದಿವಾಕರ., **ಕರ್ನಾಟಕ ಏಕೀಕರಣ ಕಥೆ**, ೧೯೫೬, ಪು. ೨೫

೧೫. ಗೋಪಾಲರಾವ್ ಎಚ್.ಎಸ್., ಮೇಲಿನದೇ, ಪು. ೧೩೫

* * *

ಅಧ್ಯಾಯ ೬

# ಸಮಾರೋಪ

ಕರ್ನಾಟಕ ಸ್ವಾತಂತ್ರ್ಯ ಚಳವಳಿಯನ್ನು ಅವಲೋಕಿಸಿದಾಗ ವಿವಿಧ ಏರುಪೇರುಗಳು ಕಂಡುಬರುತ್ತವೆ. ಅನೇಕ ಚಳವಳಿಗಳು ಸಹ ಕರ್ನಾಟಕ ವ್ಯಾಪಿ ಗೋಚರಿಸುತ್ತವೆ. ಅದರಲ್ಲೂ ಸ್ವಾತಂತ್ರ್ಯದ ನಂತರ ಜನಪ್ರಭುತ್ವವನ್ನು ಪಡೆಯಲು ಮೈಸೂರು ಸಂಸ್ಥಾನದಲ್ಲಿ ನಡೆದ ಮೈಸೂರು ಚಲೋ ಚಳವಳಿ ಪ್ರಮುಖವಾಗಿದೆ. ಈ ಚಳವಳಿಯು ರಾಜಪ್ರಭುತ್ವವನ್ನು ಮಟ್ಟಹಾಕಿ ಸಮಾಜದ ಜನತೆಯ ಪ್ರಜಾಸತ್ತಾತ್ಮಕ ಆಳ್ವಿಕೆಯನ್ನು ನಡೆಸುವ ಧೋರಣೆಯನ್ನು ಹೊಂದಿರುವುದು ಕಂಡುಬರುತ್ತದೆ. ಈ ಜವಾಬ್ದಾರಿ ಸರ್ಕಾರದ ಹೋರಾಟ ಬಹಳ ಹಿಂದೆಯೇ ಆರಂಭವಾಯಿತಾದರೂ, ಇದು ೧೯೩೮ರಿಂದ ಕಾಂಗ್ರೆಸ್ ಪಕ್ಷದ ಮುಂದಾಳತ್ವದಲ್ಲಿ ಬಿರುಸಿನ ಕಾರ್ಯಾಚರಣೆಯಾಗಿ ನಡೆಯಿತು.

ಮೈಸೂರು ಚಲೋ ಚಳವಳಿಯು ಅನೇಕ ನಾಯಕರ ಮುಂದಾಳತ್ವದಲ್ಲಿ ಉಗ್ರ ಸ್ವರೂಪ ಪಡೆದುಕೊಂಡಿತು. ೪೨ ದಿನಗಳ ಕಾಲ ನಿಗದಿತ ಕಾಲಾವಧಿಯಲ್ಲಿ ಈ ಚಳವಳಿ ಅರಮನೆಯ ರಾಜಶಾಹಿಯ ವಿರುದ್ಧ ನಡೆಯಿತು. ಈ ಚಳವಳಿಯ ಮುಖ್ಯ ಉದ್ದೇಶ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವುದು. ಅಂದರೆ ಹಿಂದೆ ಬೇಜವಾಬ್ದಾರಿ ಸರ್ಕಾರ ಇತ್ತೆಂದು ಭಾವಿಸಲಾಗದು. ಜನತೆಗೆ ಹೆಚ್ಚಿನ ಅಧಿಕಾರವಿರಲಿಲ್ಲ. ಅವರ ಬೇಡಿಕೆಗಳಿಗೆ ರಾಜರು ಹಾಗೂ ದಿವಾನರೊಡಗೂಡಿದ ಮಂತ್ರಿಮಂಡಲ ಸರಿಯಾದ ರೀತಿಯಲ್ಲಿ ಸ್ಪಂದಿಸುತ್ತಿರಲಿಲ್ಲ. ಈ ಚಳವಳಿಯಲ್ಲಿ ಎಲ್ಲ ಸಮುದಾಯದ ಜನವರ್ಗಗಳು ಮಿಳಿತವಾಗಿ ಸಂಸ್ಥಾನದ ಎಂಟು ಜಿಲ್ಲೆಗಳಲ್ಲಿಯೂ, ತಾಲ್ಲೂಕು, ಹಳ್ಳಿಗಳಲ್ಲೂ ಬಿರುಸಿನ ಪ್ರತಿಭಟನೆ ನಡೆಯಿತು. ವಸಾಹತುಶಾಹಿಯ ಆಳ್ವಿಕೆಯನ್ನೇ ಸಂಸ್ಥಾನದ ಮಹಾರಾಜರು ಮುಂದುವರೆಸಿಕೊಂಡು ಬಂದರೆನ್ನಬಹುದು. ಈ ಚಳವಳಿಯನ್ನು ನಿಯಂತ್ರಿಸಲು ರಾಜಶಾಹಿ ಅನೇಕ ರೀತಿಯ ಪ್ರಯೋಗಗಳನ್ನು ಮಾಡಿತು. ಆದರೆ ಜನಸಂಘಟನೆಯ ಮುಂದೆ ಇವ್ಯಾವು ನಡೆಯಲಿಲ್ಲ. ಪ್ರಜಾಸತ್ತಾತ್ಮಕ ಚಳವಳಿಯ ಸಂದರ್ಭದಲ್ಲಿ ಜಾತಿ, ಮತ, ಧರ್ಮ, ಭಾಷೆ, ವರ್ಗ ಮುಂತಾದ ಎಲ್ಲ ಬಗೆಯ ಭಿನ್ನ ಭೇದಗಳನ್ನು ಮರೆತು ಜನರು ಐಕ್ಯಮತದಿಂದ ರಾಜಶಾಹಿಯ ವಿರುದ್ಧ ಹೋರಾಟ ನಡೆಸಿದರು.

ಮೈಸೂರು ಚಲೋ ಚಳವಳಿಯು ಸಂಸ್ಥಾನದ ಎಲ್ಲ ಪ್ರದೇಶದ ಭಾಗಗಳಿಂದ ಹೊರಟು ಮೈಸೂರು ಅರಮನೆಯ ಮುಂದೆ ಸತ್ಯಾಗ್ರಹ ನಡೆಸುವುದಾಗಿತ್ತು. ಆ ಸಂದರ್ಭದಲ್ಲಿ ದಿವಾನರು ಅನೇಕ ಪ್ರತಿರೋದವನ್ನು ಒಡ್ಡಿದರು. ಸುಮಾರು ವರ್ಷಗಳ ಕಾಲ ಬ್ರಿಟಿಷ್ ವಸಾಹತುಶಾಹಿಗಳ ಪ್ರತ್ಯಕ್ಷ ಹಾಗೂ ಪರೋಕ್ಷ ಆಡಳಿತಗಳಿಗೆ ಒಳಪಟ್ಟಿದ್ದ ಮೈಸೂರು ಸಂಸ್ಥಾನ ಬ್ರಿಟಿಷ್ ಹಾಗೂ ರಾಜಪ್ರಭುತ್ವದ ಆಳ್ವಿಕೆಯಿಂದ ಬೇಸತ್ತಿತ್ತು. ಒಟ್ಟಾರೆಯಾಗಿ ಮೈಸೂರು ಸಂಸ್ಥಾನ ವಸಾಹತುಶಾಹಿಯ ರೂಪರೇಷಗಳನ್ನು ಅಳವಡಿಸಿಕೊಂಡು ಬೆಳೆಯಲು ಮುಂದಾಯಿತು. ಈ ಎಲ್ಲ ಏಳು-ಬೀಳುಗಳನ್ನು ಚಳವಳಿಯ ಸಂದರ್ಭದಲ್ಲಿ ಮೈಸೂರಿನ ಜನತೆಗೆ ಗಾಂಧೀಜಿಯ ತತ್ವಾದರ್ಶನಗಳಿಂದ ಸ್ಥಾಪಿತವಾದ ಸಂಸ್ಥಾನಿ ಕಾಂಗ್ರೆಸ್ ತಿಳಿಯಪಡಿಸಿತು.

ಬ್ರಿಟಿಷ್ ವಸಾಹತುಶಾಹಿ ಮೈಸೂರು ಸಂಸ್ಥಾನವನ್ನು ಅನೇಕ ಭಾಗಗಳನ್ನಾಗಿ ವಿಂಗಡಿಸಿ, ಒಂದು ಭಾಗವನ್ನು ರಾಜರ ಸುಪರ್ದಿಗೆ ಬಿಟ್ಟು ಕೆಲವು ನಿಯಮಾನುಸಾರ ಆಳ್ವಿಕೆಗೊಳಪಡಿಸಿತು. ಮೈಸೂರು ಸಂಪನ್ಮೂಲಗಳಲ್ಲಿ ಸಮೃದ್ಧಿ ಹೊಂದಿದ್ದರ ಪರಿಣಾಮವಾಗಿ ಇದನ್ನು ಬ್ರಿಟಿಷ್ ಸರ್ಕಾರ ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿತು. ತನ್ನ ಎಲ್ಲ ಅಧಿಕಾರ, ಆಡಳಿತ ಸ್ವರೂಪವನ್ನು ಬದಲಾಯಿಸಿಕೊಂಡಿತು. ಇಲ್ಲಿ ಸಂಸ್ಥಾನಿ ಜನತೆಯ ಹಿತಾಸಕ್ತಿಗಳಿಗೆ ಸ್ಪಂದಿಸದೆ ಅನೇಕ ರೀತಿ ಹೋರಾಟಗಳಿಗೆ, ವೈಮನಸ್ಸಿಗೆ ಅವರ ಒಡೆದು ಆಳುವ ನೀತಿ ಕಾರಣವಾಯಿತು. ಕೊನೆಗೆ ಬ್ರಿಟಿಷ್ ವಸಾಹತುಶಾಹಿಯು ಆಲೋಚಿಸಿದ್ದಂತಹ ಕೆಲಸ ಕಾರ್ಯಗಳನ್ನು ರಾಜಶಾಹಿಯು ಅವರ ಮೆಚ್ಚುಗೆ ಪಡೆಯಲು, ಮೊದಲೆ ನಿರ್ವಹಿಸಿ ಜಾರಿಗೊಳಿಸುತ್ತಿದ್ದರು. ಪರಿಣಾಮವಾಗಿ ಸಂಸ್ಥಾನಿ ರಾಜರು ಬ್ರಿಟಿಷರ ಸ್ನೇಹಗಳಿಸಲು ಮುಂದಾದರು. ಇಡೀ ಭಾರತ ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾಗಲೂ ಸಹ ಬ್ರಿಟಿಷರ ಅಧೀನದಲ್ಲಿದ್ದ ಮೈಸೂರು ಸಂಸ್ಥಾನ ಹಲವು ಏಳಿಗೆಗಳನ್ನು ಸಾಧಿಸಿತು. ಈ ಎಲ್ಲ ಏಳಿಗೆಗಳನ್ನು ಯಾವ ಬೇರೆ ಸಂಸ್ಥಾನಗಳು ಕಾರ್ಯರೂಪಕ್ಕೆ ತಂದಿರಲ್ಲಿಲ್ಲ. ಆದರೆ ಮೈಸೂರು ರಾಜಶಾಹಿ ಬ್ರಿಟಿಷರ ನೀತಿಯನ್ನು ಅಳವಡಿಸಿಕೊಂಡು ಸಂಸ್ಥಾನವನ್ನು ಮಾದರಿ ಸಂಸ್ಥಾನವನ್ನಾಗಿಸಿತು. ಆದರೆ ಈ ಮಾದರಿ ಮೈಸೂರು ಎಂಬ ಕಲ್ಪನೆಯೇ ವಸಾಹತುಶಾಹಿಯ ಮೂರ್ತಿಯಾಗಿ ರೂಪಿತಗೊಂಡಿತು. ಈ ಸಂಸ್ಥಾನ ಅಂದಿನ ಕಾಲಕ್ಕೆ ಅನೇಕ ಏಳಿಗೆಗಳನ್ನು ಕಂಡರೂ ಸಹ ಅದು ಬ್ರಿಟಿಷ್ ವಸಾಹತುಶಾಹಿಯ ಒಪ್ಪಿಗೆಯಿಂದಲೇ ಎಂಬುದು ಮುಖ್ಯವಾಗುತ್ತದೆ.

ಪ್ರಮುಖವಾಗಿ ಮೈಸೂರು ಸಂಸ್ಥಾನದಲ್ಲಿ ೧೮೮೧ರ ಸುಮಾರಿಗೆ ಪ್ರಜಾಪ್ರಭುತ್ವ ರಾಜ್ಯ ಉದಯಿಸಿತು ಎಂದು ಹೇಳುವ ಅನೇಕ ಮಂದಿ ಇದರಲ್ಲಿ ಇಬ್ಬಗೆಯ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಇಲ್ಲಿ ಪ್ರಮುಖವಾಗಿ ಮೂರು ಪ್ರಭುತ್ವಗಳಿದ್ದು, ಎರಡು ಪ್ರಭುತ್ವಗಳು ಆಳ್ವಿಕೆ ನಡೆಸುತ್ತಿದ್ದರ ಪರಿಣಾಮವಾಗಿ ಮೂರನೆಯದಾದ ಜನಪ್ರಭುತ್ವ ಕಡೆಗಣಿಸಲ್ಪಟ್ಟಿತ್ತು. ಅದರ ಹಿತವನ್ನುಗಳಿಸುವ ಸಲುವಾಗಿ ಆಳ್ವಿಕೆ ಮಾಡುತ್ತಿದ್ದ ಬ್ರಿಟಿಷ್‌ಪ್ರಭುತ್ವ ಮತ್ತು ರಾಜಪ್ರಭುತ್ವಗಳು ಒಂದುಗೂಡಿ, ಜನ ಪ್ರಭುತ್ವಕ್ಕೆ ಸಮಾಧಾನಕರವಾದ, ಶಕ್ತಿಹೀನವಾದ ಒಂದು ಸಭೆಯನ್ನು ರಚಿಸಿ

'ಪ್ರಜಾಪ್ರತಿನಿಧಿ ಸಭೆ' ಎಂದು ಕರೆದು, ಅಲ್ಲಿ ಮೊದಲಿಗೆ ಶ್ರೀಮಂತರ, ಬಂಡವಾಳಶಾಹಿಗಳ ಹಿತಾಸಕ್ತಿಗೆ ಮಾತ್ರ ಬೆಲೆ ಕೊಡುತ್ತಿದ್ದರು. ಈ ಪ್ರತಿನಿಧಿ ಸಭೆ ಕೇವಲ ಅಹವಾಲುಗಳನ್ನು ಸ್ವೀಕರಿಸಿ, ಕೈ ಬಿಡುವ ಕೆಲಸವನ್ನು ಮಾತ್ರ ಮಾಡುತ್ತಿತ್ತು. ಈ ರೀತಿಯ ಸಭೆಯನ್ನು ಪ್ರಜಾಪ್ರತಿನಿಧಿ ಸಭೆ ಎನ್ನುವುದು ಎಷ್ಟು ಸಮಂಜಸವಾಗಿರಲು ಸಾಧ್ಯವೆಂಬುದು ಗಮನಿಸಬೇಕಾದ ಅಂಶವಾಗಿದೆ. ಈ ಸಭೆಯೇ ಮುಂದೆ ಜವಾಬ್ದಾರಿಯುತ ಸರ್ಕಾರ ರಚಿಸಲು ವೇದಿಕೆಯಾಯಿತು.

ಮೈಸೂರು ಸರ್ಕಾರಕ್ಕೆ ಅತಿಯಾದ ವಿರೋಧ, ಸಂಕಟ ಉಂಟಾಗಿದ್ದು ೧೯೩೭ರ ಸುಮಾರಿಗೆ. ಈ ಅವಧಿಯಲ್ಲಿ ರಾಜಶಾಹಿಯನ್ನು ವಿರೋಧಿಸುವಂತಹ ಸಮರ್ಥವಾದ ರಾಜಕೀಯ ಪಕ್ಷವಾದ ಹಿಂದುಳಿದ ವರ್ಗಗಳ ಪ್ರಜಾಸಂಯುಕ್ತ ಪಕ್ಷ ಮತ್ತು ಕಾಂಗ್ರೆಸ್ ತತ್ವಗಳನ್ನು ಪ್ರತಿಪಾದಿಸುತ್ತಿದ್ದ ಬ್ರಾಹ್ಮಣ ವರ್ಗ ಸೇರಿಕೊಂಡು ಜವಾಬ್ದಾರಿ ಸರ್ಕಾರದ ಅಗತ್ಯದ ಬಗ್ಗೆ ಜನರಲ್ಲಿ ಅರಿವನ್ನು ಉಂಟುಮಾಡಿ ಕಾರ್ಯಗತವಾಯಿತು. ಮೈಸೂರು ಕಾಂಗ್ರೆಸ್ ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ಬೇರ್ಪಟ್ಟು ಸ್ವತಂತ್ರವಾಗಿ ಸಂಸ್ಥಾನದ ವಿರುದ್ಧ ಹೋರಾಡುವ ಪಕ್ಷವಾಗಿ ನಿಂತಿತು. ಇದು ಸಂಸ್ಥಾನದ ದಿವಾನರಿಗೆ ಉಸಿರುಕಟ್ಟುವಂತಾಯಿತು. ಚಳವಳಿಯ ದಿಕ್ಕನ್ನೆ ಬದಲಿಸಿ ಮೈಸೂರು ಸರ್ಕಾರಕ್ಕೆ ಕಾಂಗ್ರೆಸ್ ವಿರೋಧಿಯಾಗಿ ಪರಿಣಮಿಸಿತು. ಈ ಸಂಸ್ಥಾನಿ ಕಾಂಗ್ರೆಸ್ ಅನೇಕ ಜನ ಹಿತ ಸಭೆಗಳನ್ನು ನಡೆಸಿ ಜನರಲ್ಲಿ ಸಂಘಟನಾ ಭಾವವನ್ನು ತುಂಬುತ್ತಿತ್ತು ಹಾಗೂ ಚುನಾವಣೆಗಳಲ್ಲಿ ಭಾಗವಹಿಸಿ ಅತ್ಯಧಿಕ ಬಹುಮತದಿಂದ ಜಯಗಳಿಸುತ್ತಿತ್ತು. ದಿವಾನರು ಪ್ರಮುಖವಾಗಿ ಕಾಂಗ್ರೆಸ್ ಪಕ್ಷದ ಮುಂದಾಳತ್ವದಲ್ಲಿ ಹಮ್ಮಿಕೊಂಡಿದ್ದ ಚಳವಳಿಯನ್ನು ದಮನಮಾಡಲು ಪ್ರಥಮವಾಗಿ ಮುಂದಾದರು. ಆದರೆ ರಾಜಶಾಹಿಗೆ ಬೆಂಬಲವಾಗಿ ನಿಲ್ಲುವಂತಹ ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರ ರಾಜಕೀಯ ಚಟುವಟಿಕೆಗಳಿಗೆ ಹೆಚ್ಚು ಪ್ರೋತ್ಸಾಹ ಕೊಡುತ್ತಿದ್ದರು. ಆಗಿನ ದಿವಾನರುಗಳಲ್ಲಿ ಹೆಚ್ಚಾಗಿ ನಿರಂಕುಶ ಪ್ರಭುತ್ವದಲ್ಲಿ ಅಚಲ ವಿಶ್ವಾಸವಿದ್ದಂಥವರಿದ್ದರೆಂಬುದು ಅವರ ನಿಲುವುಗಳಿಂದ ಕಂಡುಬರುತ್ತದೆ. ಆದರೆ ಕಾಂಗ್ರೆಸ್ ಜನತಾಂತ್ರಿಕ ಪ್ರತಿಭಟನೆಗೆ ಮುಂದಾಯಿತು. ಹಾಗೂ ಮಹಾರಾಜರ ವಿರೋಧ ಕಟ್ಟಿಕೊಳ್ಳದೆ, ಅವರ ನೇತೃತ್ವದಲ್ಲಿಯೇ ಜವಾಬ್ದಾರಿ ಸರ್ಕಾರ ಸ್ಥಾಪಿಸಿ ಜನತೆಯ ಬೆಂಬಲವನ್ನು ಕಳೆದುಕೊಳ್ಳದೆ ಇರುವುದು ಕಾಂಗ್ರೆಸ್ಸಿನ ನೀತಿಯಾಗಿತ್ತು.

ಭಾರತದ ಸ್ವಾತಂತ್ರ್ಯ ಚಳವಳಿಯ ಬಿಸಿ ಇರುವಾಗಲೆ ಮೈಸೂರು ಸಂಸ್ಥಾನದ ಜನತೆ ಮೈಸೂರು ಚಲೋಗೆ ವಿದ್ಯುಕ್ತ ಚಾಲನೆ ನೀಡಿದರು. ಈ ಚಳವಳಿಯಲ್ಲಿ ಸಂಸ್ಥಾನ ಎಂಟು ಜಿಲ್ಲೆಯ ರೈತರು, ಕಾರ್ಮಿಕರು, ಮಹಿಳೆಯರು, ವಿದ್ಯಾರ್ಥಿಗಳು, ಹಾಗೂ ಎಲ್ಲ ವರ್ಗದ ಜನರು ಹೋರಾಡಿದರು. ಅಲ್ಲದೆ ಸಂಸ್ಥಾನೇತರ ಜನರು, ಪಕ್ಷಗಳೂ ಸಹ ಭಾಗವಹಿಸಿದ್ದರು. ಹಿಂದಿನ ಚಳವಳಿಗಳಲ್ಲಿ ಕೈಗೊಂಡಿದ್ದ ತಂತ್ರಗಳನ್ನೆ ಅಂದರೆ ಪಿಕೆಟಿಂಗ್, ಕಾರ್ಖಾನೆಯನ್ನು ಮುಚ್ಚುವುದು, ತಂತಿ, ಟೆಲಿಫೋನ್ ಕತ್ತರಿಸುವುದು, ವಿದ್ಯಾರ್ಥಿಗಳು ಶಾಲೆಗೆ ಹೋಗದಿರುವುದು ಇತ್ಯಾದಿಗಳಿಂದ ಸಂಸ್ಥಾನಕ್ಕೆ ಆರ್ಥಿಕ ಹೊರೆಯಾಗುವಂತೆ ಮಾಡಿದರು. ಮೈಸೂರು ಸಂಸ್ಥಾನದಲ್ಲಿ ಮೈಸೂರು

ಚಲೋ ಚಳವಳಿ, ಬ್ರಿಟಿಷರು ಭಾರತಕ್ಕೆ ಸ್ವಾತಂತ್ರ್ಯ ಬಿಟ್ಟುಕೊಟ್ಟ ಮೇಲೆ ನಡೆದ ಪ್ರಮುಖ ಚಳವಳಿಯಾಗಿದೆ.

ಕರ್ನಾಟಕದಲ್ಲಿ ಬ್ರಿಟಿಷರ ಅಧೀನದಲ್ಲಿ ಆಳ್ವಿಕೆ ನಡೆಸಿದ ರಾಜಪ್ರಭುತ್ವವು ಸಂಸ್ಥಾನಿ ಜನರಿಗೆ ಅನೇಕ ರೀತಿ ತೊಂದರೆಗಳನ್ನು ಅನುಭವಿಸುವಂತೆ ಮಾಡಿತು. ಈ ನಿರಂಕುಶ ಪ್ರಭುತ್ವವು ಎಲ್ಲ ದೇಶಗಳಲ್ಲೂ, ಎಲ್ಲ ಕಾಲದಲ್ಲಿಯೂ ಇದ್ದು ಅಲ್ಲಿನ ಜನರಿಂದಲೆ ದಮನವಾಗಿ ಜನರಿಂದ, ಜನರಿಗಾಗಿ, ಜನರಿಗೋಸ್ಕರ ಆಳ್ವಿಕೆ ಮಾಡಲ್ಪಡುವ ಪ್ರಜಾಪ್ರಭುತ್ವ ಮಾದರಿ ಸ್ಥಾಪಿತವಾದದ್ದು ಈಗ ಚರಿತ್ರೆ, ಅದೇ ರೀತಿ ಮೈಸೂರಿನ ರಾಜಸಮ್ಮುಖದಲ್ಲಿ ಕೆ.ಸಿ.ರೆಡ್ಡಿಯವರು ನೂತನ ಮುಖ್ಯಮಂತ್ರಿಯಾಗಿ ಮಂತ್ರಿಮಂಡಲವನ್ನು ರಚಿಸಿದರು. ನೂತನ ರಾಜ್ಯಾಂಗವನ್ನು ಮೈಸೂರಿಗೆ ಮಾತ್ರ ರೂಪಿಸುವ ಯೋಜನೆಯು ವಿಫಲವಾಗಿ ಇಡೀ ಭಾರತಕ್ಕೆ ಒಂದೇ ರಾಜ್ಯಾಂಗವನ್ನು ಕೇಂದ್ರ ಸರ್ಕಾರ ರಚಿಸಿತು. ಪ್ರಜಾಪ್ರಭುತ್ವ ಮಾದರಿಯಂತೆ, ಪ್ರಜೆಗಳಿಂದ ಚುನಾಯಿತರಾದ ಮಂತ್ರಿಗಳು ಚಳವಳಿಯ ಸಂದರ್ಭದಲ್ಲಿ ಉಂಟಾಗಿದ್ದ, ಅಸಮಾಧಾನಗಳು ಹಾಗೂ ರಾಜಕೀಯ ಬಿಕ್ಕಟ್ಟುಗಳನ್ನು ಬಗೆಹರಿಸಲು ಮುಂದಾದರು.

ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಮೈಸೂರು ಸಂಸ್ಥಾನಕ್ಕೆ ದೇಶಿಯ ರಾಜರಿಂದ ಸ್ವಾತಂತ್ರ್ಯ ಪಡೆಯುವ ಸದುದ್ದೇಶದಿಂದ ರಾಜಸತ್ತೆಯ ವಿರುದ್ಧ ಪ್ರಬಲವಾಗಿ ನಡೆದ ಮೈಸೂರು ಚಲೋ ಚಳವಳಿ ಸಾಮಾಜಿಕವಾಗಿ ಹಾಗೂ ಸಂಸ್ಥಾನದಲ್ಲಿ ಒಂದು ಹೊಸ ಶಕೆಯನ್ನು ಆರಂಭಿಸುವ ಉದ್ದೇಶ ಹೊಂದಿತು. ಚಳವಳಿಯಲ್ಲಿ ಪ್ರತಿಯೊಬ್ಬರು ಉತ್ಸಾಹಭರಿತರಾಗಿ ರಾಜರ ಮತ್ತು ದಿವಾನರ ಅಟ್ಟಹಾಸವನ್ನು ಮಟ್ಟಹಾಕಲು ಶ್ರಮಿಸಿದರು. ಮೈಸೂರು ಚಲೋ ಚಳವಳಿಯು ಮೈಸೂರಿನ ಅರಮನೆಯ ಮುಂದೆ ಹೋಗಿ ಜನತೆಗೆ ಆಳ್ವಿಕೆ ನಡೆಸುವ ಹಕ್ಕನ್ನು ಪಡೆಯುವ ಉದ್ದೇಶದಿಂದ ಕಾರ್ಯರೂಪಕ್ಕೆ ಬಂದದ್ದು, ಅನೇಕ ದೇಶಗಳ ಚಿಂತಕರ ತತ್ವಾನುದರ್ಶನದಿಂದ ಈ ಪ್ರಜಾಪ್ರಭುತ್ವ ಮಾದರಿಯನ್ನು ಎರವಲಾಗಿ ಪಡೆದ ಮೈಸೂರು ಜನತೆ ಕೊನೆಗೂ ಸಫಲರಾದರು.

ಅಂದಿನ ಸಂದರ್ಭದಲ್ಲಿಯೂ ಸಹ ರಾಜಕೀಯದ ಒಳನೋಟಗಳ ಕುತಂತ್ರಗಳು ಕಂಡುಬಂದರೂ ಸಹ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಯಿತು. ಇದಕ್ಕೆ ರಾಷ್ಟ್ರೀಯ ನಾಯಕರ ಬೆಂಬಲವು ಅಪ್ರತಿಮವಾಗಿತ್ತು. ಸರ್ಕಾರವು ಎಡವಿದಾಗ, ಜನತೆಯ ಹಕ್ಕುಗಳನ್ನು ನಿಯಂತ್ರಿಸಿದಾಗ ಜನಸಂಘಟನೆಗಳ ಮೂಲಕ ಜಯಶಾಲಿಗಳಾಗಬಹುದೆಂದು ಮೈಸೂರು ಚಲೋ ಚಳವಳಿ ತೋರಿಸಿಕೊಟ್ಟಿತು. ರಾಜಪ್ರಭುತ್ವವನ್ನು ಮಟ್ಟ ಹಾಕಿ ಪ್ರಜಾಪ್ರಭುತ್ವ ಸ್ಥಾಪನೆಗೆ ಅಡಿಗಲ್ಲು ಹಾಕಿದ ಈ ಚಳವಳಿ ಕರ್ನಾಟಕದ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಮೈಲಿಗಲ್ಲಾಗಿದೆ.

ಬ್ರಿಟಿಷರ ವಿರುದ್ಧ ಹೋರಾಡಿ ಸ್ವಾತಂತ್ರ್ಯವನ್ನು ಗಳಿಸುವಲ್ಲಿ ಯಶಸ್ವಿಯಾದ ಭಾರತೀಯ ಜನತೆ ತಮ್ಮ ಸ್ವಾತಂತ್ರ್ಯಕ್ಕೆ ತಡೆಯಾಗಿದ್ದ ಕೆಲವು ಸಂಸ್ಥಾನಗಳನ್ನು ಅಧಿಕಾರ ತ್ಯಜಿಸುವಂತೆ

ಮಾಡುವಲ್ಲಿಯೂ ಯಶಸ್ವಿಯಾಯಿತು. ಮೈಸೂರು ಒಡೆಯರು ಬ್ರಿಟಿಷರ ಅಧೀನದಲ್ಲಿ ಆಶ್ರಿತ ಸಂಸ್ಥಾನಿಕರಾಗಿ ಮಾದರಿ ಆಡಳಿತವನ್ನು ನೀಡಿದರೂ, ಜನರಿಗೆ ನಿಜವಾದ ಸ್ವಾತಂತ್ರ್ಯವನ್ನು ನೀಡುವಲ್ಲಿ ಹಿಂದೇಟು ಹಾಕಿದರು. ಪ್ರಜಾಪ್ರಭುತ್ವವನ್ನು ರಾಜಪ್ರಭುತ್ವ ಯಾವತ್ತೂ ಒಪ್ಪುವುದಿಲ್ಲ ಹಾಗೂ ಒಪ್ಪುವುದಕ್ಕೆ ಸಾಧ್ಯವೂ ಇಲ್ಲ. ಏಕೆಂದರೆ ಇದು ಆಯಾ ಪ್ರಭುತ್ವದ ಅಸ್ತಿತ್ವದ ಪ್ರಶ್ನೆ. ಈ ಕಾರಣದಿಂದಾಗಿಯೇ ಮೈಸೂರು ಆಡಳಿತ ಉದಾರವಾದಿಯಾಗಿ, ಸಂವಿಧಾನಾತ್ಮಕವಾಗಿ ಹಾಗೂ ಪ್ರಜ್ಞಾವಂತವಾಗಿ ನಡೆದುಕೊಂಡರೂ ಜನಪ್ರಭುತ್ವದ ಪರವಾಗಿರಲಿಲ್ಲ. ಏಕೆಂದರೆ ಅದು ಏನೇ ಬದಲಾವಣೆ ತಂದರೂ ಅದು ರಾಜಪ್ರಭುತ್ವದ ಚೌಕಟ್ಟಿನಲ್ಲಿಯೇ ಇರುತ್ತಿತ್ತು. ಹೀಗಾಗಿ ಚಳವಳಿ ಅನಿವಾರ್ಯವಾಗಿ, ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬಂದಿತು.

* * *

# ಗ್ರಂಥಋಣ


೧. ಅಕ್ಕಿ ಎ. ಎಂ., **ಸ್ವತಂತ್ರ್ಯ ಹೋರಾಟದ ದಿಗ್ಗಜರು,** ವಿದ್ಯಾ ಪಬ್ಲಿಕೇಷನ್ಸ್, ದಾವಣಗೆರೆ, ೧೯೯೭

೨. ಅನಿಲ್ ಸೆಕ್ಸೆನಾ., **ಎನ್‌ಸೈಕ್ಲೋಪೀಡಿಯ ಆಫ್ ಇಂಡಿಯನ್ ಹಿಸ್ಟರಿ,** ಸಂ.೨೪,೨೬, ಅನ್‌ಮೊಲ್ ಪಬ್ಲಿಕೇಷನ್, ನವದೆಹಲಿ, ೨೦೦೬

೩. ಆರಾಧ್ಯ ಆರ್. ಎಸ್., **ಮೈಸೂರು ಕಾಂಗ್ರೆಸ್‌ನ ಮುಂದಾಳುಗಳು,** ತುಮಕೂರು,

೪. ಉಮಾಪತಿ ಕೆ. ಎಸ್., **ಮೈಸೂರು ಚಲೋ ಸತ್ಯಾಗ್ರಹ ಪತ್ರಗಳು,** ಅಂಕಿತ ಪುಸ್ತಕ, ಬೆಂಗಳೂರು, ೧೯೮೮

೫. ಕೃಷ್ಣರಾವ್ ಎಂ. ವಿ., **ಪ್ರಜಾ ಸರ್ಕಾರ,** ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, ೧೯೫೫

೬. **ಕರ್ನಾಟಕ ಪರಂಪರೆ., ಸಂ೨,** ಮೈಸೂರು ರಾಜ್ಯ ಸರ್ಕಾರ, ೧೯೭೦

೭. ಕೃಷ್ಣರಾವ್ ಎಂ. ವಿ. ಮತ್ತು ಕೇಶವಭಟ್ಟ ಎಂ., **ಕರ್ನಾಟಕ ಇತಿಹಾಸ ದರ್ಶನ,** ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೦

೮. ಕಾಮತ್, ಸೂರ್ಯನಾಥ ಮತ್ತು ಲಕ್ಷ್ಮಣ್ ತೆಲಗಾವಿ., **ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೮

೯. ಕರ್ನಾಟಕ ಪ್ರಿವೆನ್ಸಿಯಲ್ ಕಾಂಗ್ರೆಸ್ ಕಮಿಟಿ ಬುಲೆಟಿನ್ ಆನ್ **ಮೈಸೂರು ಸತ್ಯಾಗ್ರಹ,** ಧಾರಾವಾಡ, ೧೯೪೯

೧೦. ಕೃಷ್ಣಮೋಹನ್., **ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಅಂಡ್ ದಿ ಫ್ರೀಡಂ ಮೂವ್‌ಮೆಂಟ್,** ಬುಕ್ ಎನ್‌ಕ್ಲೇವ್, ಜೈಪುರ, ೧೯೯೯

೧೧. ಗೋಪಾಲ ಬಾ. ರಾ., **ಇತಿಹಾಸ ಶಾಸ್ತ್ರ ಮತ್ತು ಸಿದ್ಧಾಂತ,** ಪ್ರಸಾರಾಂಗ, ಮೈಸೂರು ವಿ. ವಿ., ಮೈಸೂರು, ೧೯೯೭

೧೨. ಗುಂಡಪ್ಪ ಡಿ.ವಿ., **ಮೈಸೂರಿನ ದಿವಾನರು,** ಕಾವ್ಯಾಲಯ, ಮೈಸೂರು, ೧೯೭೧

೧೩. ಗುಂಡಪ್ಪ ಡಿ.ವಿ., **ಜ್ಞಾಪಕ ಚಿತ್ರ ಶಾಲೆ ಸಂಪುಟಗಳು,** ಮೈಸೂರು, ೧೯೬೯

೧೪. ಗುಂಡಪ್ಪ ಡಿ.ವಿ., **ಹಲವರು ಸಾರ್ವಜನಿಕರು,** ಮೈಸೂರು, ೧೯೭೧

೧೫. ಗುಸ್ತಫ್‌ಸನ್ ಡಿ.ಆರ್., **ದಿ ಮೇಕಿಂಗ್ ಆಫ್ ಎ ಮಾಡಲ್ ಸ್ಟೇಟ್ ಮೈಸೂರು, ೧೮೮೧–೧೯೦೧**

೧೬. ಗ್ರೋವರ್ ವೆರಿಂಡರ್(ಸಂ)., **ಪೊಲಿಟಿಕಲ್ ಸಿಸ್ಟಮ್ ಇನ್ ಇಂಡಿಯಾ**, ದೀಪ್ ಅಂಡ್ ದೀಪ್, ನವದೆಹಲಿ, ೧೯೮೯

೧೭. ಗೋಪಾಲ ರಾವ್ ಎಚ್.ಎಸ್., **ಕರ್ನಾಟಕದ ಏಕೀಕರಣ ಇತಿಹಾಸ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬

೧೮. ಗೋವಿಂದರಾಜು ಸಿ.ಆರ್., **ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ** ಎಸ್‌ಬಿಎಸ್ ಪಬ್ಲಿಷರ್ಸ್, ಬೆಂಗಳೂರು, ೨೦೦೦

೧೯. ಚಂದ್ರಶೇಖರ್ ರಾ. ನಂ., **ಆಧುನಿಕ ಕರ್ನಾಟಕದ ಆತಂಕಗಳು**, ಅಲ್ಲಮ ಪ್ರಭು ಜನ ಕಲ್ಯಾಣ ಸಂಸ್ಥೆ, ಬೆಳಗಾಂ, ೨೦೦೧

೨೦. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು**, ನಮ್ಮ ಪ್ರಕಾಶನ, ಬಿಳಿಗೆರೆ, ೨೦೦೨

೨೧. ಚಂದ್ರ ಮೌಳಿ ಕೆ., **ಬೆಂಗಳೂರಿನ ನೋಟಗಳು: ಅಂದು–ಇಂದು**, ಪ್ರಿಸಂ ಬುಕ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು, ೨೦೦೨.

೨೨. ಚಂದ್ರಶೇಖರ್ ಎಸ್., **ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಒಳ ನೋಟಗಳು** ೧೮೮೧–೧೯೪೦, ಅಂಕಣ ಪ್ರಕಾಶನ, ಬೆಂಗಳೂರು, ೧೯೮೩

೨೩. ಚಂದ್ರಶೇಖರ್ ಎಸ್., (ಅನು), ಸಿ. ನಾಗಣ್ಣ, **ದಕ್ಷಿಣ ಭಾರತ: ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೦

೨೪. ಚಿನ್ನಸ್ವಾಮಿ ಸೋಸಲೆ ಎನ್., **ನಾಲ್ವಡಿ ಕೃಷ್ಣನ ಮೈಸೂರು**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೫.

೨೫. ಚಿನ್ನಸ್ವಾಮಿ ಸೋಸಲೆ ಎನ್., **ಸಾಮ್ರಾಜ್ಯ ಮತ್ತು ಸಂಸ್ಥಾನ**, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೪.

೨೬. ಚಂದೋಲ ಆರ್.ವಿ., **ಹಿಸ್ಟರಿ ಆಫ್ ಇಂಡಿಯನ್ ಫ್ರೀಡಂ ಮೂವ್‌ಮೆಂಟ್**, ಆರ್.ಬಿ.ಎಸ್.ಎ.ಪಬ್ಲಿಕೇಷನ್ಸ್, ಜೈಪುರ, ೧೯೮೮

೨೭. ಜೇಮ್ಸ್ ಮೇನರ್., **ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು** ೧೯೧೭–೧೯೫೫, ನವದೆಹಲಿ, ೧೯೭೭

೨೮. ತಂಬಂಡ ವಿಜಯ್ ಪೂಣಚ್ಚ., (ಸಂ.), **ಚರಿತ್ರೆ ವಿಶ್ವಕೋಶ**, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೧

೨೯. ತಾರಾಚಂದ್ ಮತ್ತು ದೀಕ್ಷಿತ್ ಜಿ.ಎಸ್ (ಅನು), **ಭಾರತದ ಸ್ವಾತಂತ್ರ್ಯ ಚಳವಳಿ, ಸಂ.೨**, ಪ್ರಸಾರಾಂಗ, ಕರ್ನಾಟಕ ವಿ.ವಿ, ಧಾರವಾಡ, ೧೯೬೨

೩೦. ತಿರುಮಲೆ ಶ್ರೀ ರಂಗಚಾರ್ಯ., **ಮೈಸೂರು ಪ್ರಜಾಪ್ರತಿನಿಧಿ ಕುರಿತು ದಿ.ತಿ.ತಾ. ಶರ್ಮರು ಒಂದು ಪರಿಚಯ ಲೇಖನ**, ಕರ್ನಾಟಕ ಇತಿಹಾಸ ಕಾಂಗ್ರೆಸ್. ೨೦೦೮

೩೧. ದೊರೆಸ್ವಾಮಿ ಎಚ್.ಎಸ್., **ನೆನಪಿನ ಸುರುಳಿ ತೆರೆದಾಗ**, ಸಾಹಿತ್ಯ ಮಂದಿರ, ಬೆಂಗಳೂರು.

೩೨. ದೊರೆಸ್ವಾಮಿ ಎಚ್.ಎಸ್., **ಹೋರಾಟದ ದಿಟ್ಟ ಹೆಜ್ಜೆಗಳು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೩೩. ದಿವಾಕರ ರಂ.ರಾ., **ಕರ್ನಾಟಕ ಏಕೀಕರಣ ಕಥೆ**, ಲೋಕಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ-ಬೆಂಗಳೂರು, ೧೯೯೨

೩೪. ದಿನಕರ ಡಿ.ಎಸ್., **ಶಿವಮೊಗ್ಗ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು**, ಶಿವಮೊಗ್ಗ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ, ಶಿವಮೊಗ್ಗ, ೧೯೯೩

೩೫. ದೊರೆಸ್ವಾಮಿ ಎಚ್.ಎಸ್., **ಸ್ವಾತಂತ್ರ್ಯ ಸೇನಾನಿ ಎಂ.ಎನ್. ಜೋಯಿಸರ ಆತ್ಮ ಕಥನ**, ಸಾಹಿತ್ಯ ಮಂದಿರ, ಬೆಂಗಳೂರು.

೩೬. ನರಸಿಂಹಯ್ಯ ಹೆಚ್., **ಕ್ವಿಟ್ ಇಂಡಿಯ ಮತ್ತು ಮೈಸೂರು ಚಲೋ ಚಳವಳಿಯಲ್ಲಿ ನನ್ನ ಅನುಭವಗಳು**, ನ್ಯಾಷನಲ್ ಕಾಲೇಜ್ ಪ್ರೆಸ್, ಬೆಂಗಳೂರು, ೧೯೯೩

೩೭. ನರಸಿಂಹಯ್ಯ ಹೆಚ್., **ಹೋರಾಟದ ಹಾದಿ**, (ಆತ್ಮಕಥೆ) ನ್ಯಾಷನಲ್ ಕಾಲೇಜ್, ಬೆಂಗಳೂರು, ೧೯೯೫

೩೮. ನಾಗಲಿಂಗಸ್ವಾಮಿ ನ., (ಸಂ) **ಜಯಚಾಮರಾಜ ಒಡೆಯರ್** (ಸ್ಮರಣ ಸಂಪುಟ) ಕನ್ನಡ ಕ್ರಾಂತಿದಳ, ಮೈಸೂರು, ೧೯೮೨

೩೯. ನಂಜರಾಜ ಅರಸು ಪಿ.ವಿ., **ನಾಲ್ವಡಿ ಕೃಷ್ಣರಾಜ ಒಡೆಯರ ಒಂದು ದರ್ಶನ**, ಅಖಿಲ ಕರ್ನಾಟಕ ಅರಸು ಪರಿಷತ್, ಮೈಸೂರು, ೧೯೯೬

೪೦. ನಾರಾಯಣರಾವ್ ಸಿ.ಎಸ್., **ಸ್ವಾತಂತ್ರ್ಯ ಹೋರಾಟದ ಉಜ್ವಲ ಕಿಡಿ**, ಶ್ರೀಮತಿ ಚಂದ್ರಪ್ರಭ ಮತ್ತು ಶ್ರೀಕೆ. ಪಾಡುರಂಗಪ್ಪ ಪ್ರಕಾಶನ ಬೆಂಗಳೂರು, ೨೦೦೭

೪೧. ನಾರಾಯಣರಾವ್ ವಿ.ಎಸ್., **ಕೆ.ಟಿ. ಭಾಷ್ಯಂ ಅಯ್ಯಂಗಾರ್** (ಜೀವನ ಚರಿತ್ರೆ), ಜೆ. ಲಿಂಗಯ್ಯ ಪ್ರಕಾಶನ, ಬೆಂಗಳೂರು.

೪೨. ನಾಗೇಶ್ ಹೆಚ್.ವಿ. **ಸಾಮಾಜಿಕ ಚಳವಳಿಗಳು**, ಪ್ರಸಾರಾಂಗ, ಕರ್ನಾಟಕ ವಿ.ವಿ., ಧಾರವಾಡ, ೧೯೯೯

೪೩. ನಾರಾಯಣರಾವ್ ವಿ.ಎಸ್., **ಸ್ವಾತಂತ್ರ್ಯ ಚಳವಳಿಯಲ್ಲಿ ಶ್ರೀ ಸಾಮಾನ್ಯ**, ಬೆಂಗಳೂರು, ೧೯೭೮

೪೪. ನಾಗಭೂಷಣ ಪಿ., **ಪ್ರಿನ್ಸ್‌ಲಿ ಸ್ಟೇಟ್ ಆಫ್ ಮೈಸೂರು ಅಂಡ್ ಹೈದರಬಾದ್**, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಗುಲ್ಬರ್ಗ, ೧೯೯೯

೪೫. ಪ್ರೇಮಲತಾ ಸುಂದರೇಶನ್ ಮತ್ತು ಇತರರು (ಸಂ), **ಸ್ವಾತಂತ್ರ್ಯದೆಡೆಗೆ ಎಂ.ಎಸ್ ಜೋಯಿಸ್,** (ಅಭಿನಂದನಾ ಗ್ರಂಥ). ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ೧೯೯೧

೪೬. ಪೆರ್ರಿ ಆ್ಯಂಡರ್‌ಸನ್., **ಲಿನ್ಯೇಜಸ್ ಆಫ್ ದ ಆಬ್ಸಲ್ಯೂಟಿಸ್ಟ್ ಸ್ಟೇಟ್,** ಹ್ಯುಮೇನಿಟೀಸ್ ಪ್ರೆಸ್, ಲಂಡನ್, ೧೯೭೬

೪೭. ಪ್ರಾಣೇಶ್‌ರಾವ್ ಬಿ.ಆರ್., **ಯಶೋಧರಾ ದಾಸಪ್ಪ ಮತ್ತು ಹೆಚ್.ಸಿ. ದಾಸಪ್ಪ ಜೀವನ ಮತ್ತು ಸಾಧನೆ,** ಭಾರತೀ ಪ್ರಕಾಶನ, ಮೈಸೂರು, ೧೯೯೭

೪೮. ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ, **ನಿಜಲಿಂಗಪ್ಪ ಎಸ್,** ಕರ್ನಾಟಕ ವಿಧಾನ ಸಭೆ ಸಚಿವಾಲಯ, ಬೆಂಗಳೂರು

೪೯. ಪಾರ್ಥಸಾರತಿ ಕೆ.ಎಸ್., **ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ,** ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭

೫೦. ಬಿಪನ್ ಚಂದ್ರ, ಅಮಲೇಶ್ ತ್ರಿಪಾಠಿ, ಬುರುನ್ ಡೇ., (ಅನು.) ಅನಂತರಾಮಯ್ಯ **ಸ್ವಾತಂತ್ರ್ಯದ ಹೋರಾಟ,** ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸದೆಹಲಿ, ೧೯೭೨

೫೧. ಬಿಪನ್ ಚಂದ್ರ ಮತ್ತು ಇತರರು., **ಇಂಡಿಯನ್ ಸ್ಟ್ರಗಲ್ ಫಾರ್ ಇಡಿಪೆಂಡೆನ್ಸ್** ೧೮೫೭–೧೯೪೭, ದೆಹಲಿ, ೧೯೮೯

೫೨. ಬಾಲನ್ ಕೆ., **ಇಂಡಿಯಾಸ್ ಫ್ರೀಡಂ ಸ್ಟ್ರಗಲ್ ಅಂಡ್ ನ್ಯಾಷನಲ್ ಇಂಟಗ್ರೇಶನ್,** ಅಮರ್ ಪಬ್ಲಿಕೇಷನ್, ನವದೆಹಲಿ, ೧೯೮೯

೫೩. ಬಿಪನ್ ಚಂದ್ರ., **ಎಸ್ಸೇಸ್ ಆನ್ ಇಂಡಿಯನ್ ನ್ಯಾಷನಲಿಸಂ,** ಹರಾನಂದರ ಪಬ್ಲಿಕೇಷನ್, ನವ ದೆಹಲಿ, ೧೯೯೩

೫೪. ಮಜುಂದಾರ್ ಆರ್.ಸಿ., ನಾರಾಯಣಸ್ವಾಮಿ(ಅನು) **ಸ್ವಾತಂತ್ರ್ಯ ಸಂಗ್ರಾಮ ಭಾಗ.೧, ಸಂ.೨೩,** ಭಾರತೀಯ ವಿದ್ಯಾ ಭವನ, ಬೆಂಗಳೂರು, ೧೯೯೮

೫೫. ಮೋಹನ ನಾಗಮ್ಮನವರ,(ಸಂ) **ಸ್ವಾತಂತ್ರ್ಯ ಆಂದೋಲನದ ಪ್ರಮುಖ ಧಾರೆಗಳು,** ಅಖಿಲ ಕರ್ನಾಟಕದ ಕೇಂದ್ರ ಕನ್ನಡ ಕ್ರಿಯಾ ಸಮಿತಿ, ಧಾರವಾಡ, ೨೦೦೩

೫೬. ಮೋಹನ್‌ಕೃಷ್ಣ ರೈ ಕೆ., **ವಸಾಹತುಶಾಹಿ ಮತ್ತು ನಗರೀಕರಣ,** ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೭

೫೭. ಮೋಹನ್‌ಕೃಷ್ಣ ರೈ ಕೆ., **ಪ್ರಭುತ್ವ ಮತ್ತು ಜನತೆ,** ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೦೪

೫೮. ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ನಡಾವಳಿಗಳು

೫೯. ಮುತ್ತಟ್ಟಿ ಐ.ಎಂ., **ಹಿಸ್ಟರಿ ಆಫ್ ಮಾಡರ್ನ್ ಕರ್ನಾಟಕ,** ಸ್ಟರ್‌ಲಿಂಗ್ ಪಬ್ಲಿಕೇಷನ್ಸ್ ಪ್ರೈ ಲಿಮಿಟೆಡ್, ನವ ದೆಹಲಿ, ೧೯೮೦

೬೦. ಮೈಸೂರು ಸರ್ಕಾರದ ವಾರ್ತಾ ಇಲಾಖೆ, **ಮೈಸೂರು ರಾಜ್ಯ,** ಬೆಂಗಳೂರು, ೧೯೫೬

೬೧. ರಂಗ ಶ್ರೀ., **೪೨ರ ಚಲೇಜಾವ್ ಚಳವಳಿ.,** ಪುರೋಗಾಮಿ, ಬೆಂಗಳೂರು,

೬೨. ರಾಮಸ್ವಾಮಿ ಎಸ್. ಆರ್., (ಸಂ) **ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು**, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೧೯೯೭

೬೩. ರಾಮಯ್ಯ ಪಿ.ಆರ್., **ದಯಾಸಾಗರ ಎಂ, ವೆಂಕಟ ಕೃಷ್ಣಯ್ಯ** (ಜೀವನ ಮತ್ತು ಸಾಧನೆ)

೬೪. ರಾಮಯ್ಯ ಪಿ.ಆರ್., **ಮೈಸೂರ್ಸ್ ಪೊಲಿಟಿಕಲ್ ಎವೊಲ್ಯೂಶನ್**, ಬೆಂಗಳೂರು, ೧೯೬೧

೬೫. ರೋಮಿಲಾ ಥಾಪರ್ ಮತ್ತು ಇತರರು., **ಕಮ್ಯುನಲಿಸಂ ಅಂಡ್ ದಿ ರೈಟಿಂಗ್ ಆಫ್ ಇಂಡಿಯನ್ ಹಿಸ್ಟರಿ**, ನವದೆಹಲಿ, ೧೯೮೪

೬೬. ರಾಮಕೃಷ್ಣ ಆರ್., **ದಿ ರೋಲ್ ಆಫ್ ದ ಪ್ರೆಸ್ ಇನ್ ಪ್ರಿನ್ಸ್ಲಿ ಮೈಸೂರ್** ೧೮೫೯-೧೯೪೭, (ಅಪ್ರಕಟಿತ ಪಿಎಚ್.ಡಿ ಪ್ರಬಂಧ)

೬೭. ಲಿಂಗಯ್ಯ ಡಿ., **ಸತ್ಯಾಗ್ರಹಿಗಳ ಸಂದರ್ಶನ**, ಬನಶಂಕರಿ ಪಬ್ಲಿಕೇಷನ್, ಬೆಂಗಳೂರು, ೧೯೮೧

೬೮. ವೀರತಪ್ಪ ಕೆ., **ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ**, ವಿಜಯರವಿ ಪ್ರಕಾಶನ, ಬೆಂಗಳೂರು, ೧೯೭೭

೬೯. ವೀರಣ್ಣ ಗೌಡ ಹೆಚ್. ಕೆ., **ಬದುಕು ಮೆಲುಕು**, ಪ್ರಭುದ್ಧ ಪ್ರಕಾಶನ ಮೈಸೂರು, ೧೯೭೪

೭೦. ವೆಂಕಟರಾವ್ ಆಲೂರು., **ನನ್ನ ಜೀವನ ಸ್ಮೃತಿಗಳು**, ಮನೋಹರ ಗ್ರಂಥಮಾಲ ಪ್ರಕಾಶನ, ಧಾರವಾಡ, ೧೯೭೪

೭೧. ಶರ್ಮ ತಿ.ತಾ., **ಮೈಸೂರು ಇತಿಹಾಸದ ಹಳೆಯ ಪುಟಗಳು**,

೭೨. ಶೇಷಗಿರಿರಾವ್ ಮಾ. ಬಿ., **ಮೈಸೂರು ಪೋಲೀಸ್**, ಅನುರಾಧ ಪ್ರಕಾಶನ, ಬೆಂಗಳೂರು,

೭೩. ಶರ್ಮ ತಿ.ತಾ., **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ** ಸಂ.೨. ಪುರೋಗಾಮಿ, ಬೆಂಗಳೂರು, ೧೯೭೩

೭೪. ಶ್ರೀಧರ ಮೂರ್ತಿ ಮ., **ಒಡೆಯರು ಮತ್ತು ಮೈಸೂರು**, ಬೆಂಗಳೂರು, ೧೯೭೨

೭೫. ಶಂಕರ ನಾರಾಯಣರಾವ್ ಎನ್.ಪಿ., **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು**, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೧

೭೬. ಶ್ರೀಮತಿ ಹೆಚ್.ಎಸ್., **ಕನ್ನಡ ಮಹಿಳೆ ಮತ್ತು ಸ್ವಾತಂತ್ರ್ಯ ಹೋರಾಟ**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ,

೭೭. ಶಾಮರಾವ್ ಎಂ., **ಮಾಡರ್ನ್ ಮೈಸೂರು**, ಹಿಗ್ಗಿನ್ಸ್‌ಬಾಥಮ್ಸ್, ಬೆಂಗಳೂರು, ೧೯೩೬

೭೮. ಚಂದ್ರಶೇಖರ್ ಎಸ್., (ಸಂ.), **ಕರ್ನಾಟಕ ಚರಿತ್ರೆ**, ಸಂ,೭., ಪ್ರಸಾರಾಂಗ, ಕನ್ನಡ ವಿ. ವಿ., ಹಂಪಿ, ೧೯೯೭

೭೯. ಸೆಬಾಸ್ಟಿಯನ್ ಜೋಸೆಫ್., (ಸಂ.), **ಕರ್ನಾಟಕ ಚರಿತ್ರೆ** ಸಂ.೬, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೧೯೯೭

೮೦. ಸಾಕಿ., **ಮೇಕಿಂಗ್ ಹಿಸ್ಟರಿ**, ಸಂಪುಟ-೨, ವಿಮುಕ್ತಿ ಪ್ರಕಾಶನ, ಬೆಂಗಳೂರು, ೧೯೯೮

೮೧. ಸೂರ್ಯನಾಥ ಕಾಮತ್ (ಸಂ)., **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂ.೧,೨,೩, ಗೀತಾ ಬುಕ್ ಹೌಸ್, ಮೈಸೂರು, ೧೯೭೪,೧೯೭೭,೧೯೮೦

೮೨. ಸೂರ್ಯನಾಥ ಕಾಮತ್., **ಸ್ವಾತಂತ್ರ್ಯ ಸೂರ್ಯೋದಯ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೨

೮೩. ಸೂರ್ಯನಾಥ ಕಾಮತ್., **ಕರ್ನಾಟಕ ಸಂಕ್ಷಿಪ್ತ ಇತಿಹಾಸ**, ಪಿ.ಬಿ.ಹೆಚ್, ಪ್ರಕಾಶನ, ಬೆಂಗಳೂರು,೧೯೭೩

೮೪. ಸೂರ್ಯನಾಥ ಕಾಮತ್.,(ಸಂ) **ಕರ್ನಾಟಕ ಗೆಜೆಟಿಯರ್**, ಸಂ.೨, ಬೆಂಗಳೂರು,೧೯೮೩

೮೫. ಸ್ಪೆಷಲ್ ಬ್ರಾಂಚ್ ಅಬ್‌ಸ್ಟ್ರಾಕ್ಟ್, ೧೯೪೦-೧೯೪೭

೮೬. ಸುರೇಂದ್ರರಾವ್ ಬಿ., **ದಿ ಮಾಡರ್ನ್ ಇನ್ ಮಾಡರ್ನ್ ಇಂಡಿಯನ್ ಹಿಸ್ಟರಿ**, ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ಕಲ್ಕತ್ತಾ ವಿ.ವಿ., ಜನವರಿ ೨,೪,೨೦೦೧

೮೭. ಸರೋಜಿನಿ ಮತ್ತು ರಾಘವೇಂದ್ರರಾವ್., **ವುಮೆನ್ ಫ್ರೀಡಂ ಫೈಟರ್ ಇನ್ ಕರ್ನಾಟಕ**, ಪ್ರಸಾರಾಂಗ, ಕರ್ನಾಟಕ ವಿ.ವಿ, ಧಾರವಾಡ, ೧೯೮೩

೮೮. ಸುಭಾಷ್ ಸಿ ಕಶ್ಯಪ್., **ಹಿಸ್ಟರಿ ಆಫ್ ದಿ ಫ್ರೀಡಂ ಮೂವ್‌ಮೆಂಟ್**, ನ್ಯಾಷನಲ್ ಪಬ್ಲಿಕೇಷನ್, ದೆಹಲಿ, ೧೯೯೦

೮೯. ಹಾಲಪ್ಪ ಜಿ.ಎಸ್., **ಮೈಸೂರು ರಾಜ್ಯಾಂಗ ಹೇಗೆ ರೂಪಗೊಳ್ಳಬೇಕು**, ಎಂ.ಸಿ.ಮಹದೇವ ಸ್ವಾಮಿ ಪ್ರಕಾಶನ, ಮೈಸೂರು, ೧೯೪೮

೯೦. ಹಾಲಪ್ಪ ಜಿ.ಎಸ್., **ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ**, ಸಂಪುಟ- ೨, ೧೯೬೪

೯೧. ಹೆಗಡೆ ವಿ.ಎಸ್., **ಸ್ವಾತಂತ್ರ್ಯ ಚಳವಳಿಯ ಕರಪತ್ರಗಳು**, ರಮಣಶ್ರೀ ಪ್ರಕಾಶನ, ಬೆಂಗಳೂರು, ೨೦೦೫

೯೨. ಹನುಮಂತಪ್ಪ ತೆ.,(ಸಂ.), **ವಿಧಾನ ಮಂಡಲ ಇತಿಹಾಸ**, ಮೈಸೂರು ಪ್ರಜಾಪ್ರತಿನಿಧಿ ಸಭೆ, ಸಂ.೧, ೧೮೮೧-೧೯೦೭, ಜಗನ್ಮೋಹನ ಅರಮನೆ, ಮೈಸೂರು,

೯೩. ಹಂಡ ಆರ್. ಎಲ್., **ಹಿಸ್ಟರಿ ಆಫ್ ಫ್ರೀಡಂ ಸ್ಟ್ರಗಲ್ ಇನ್ ಪ್ರಿನ್ಸ್‌ಲಿ ಸ್ಟೇಟ್**, ನವದೆಹಲಿ, ೧೯೬೮

೯೪. ಹೆಟ್ನೆ ಬಿ., **ದಿ ಪೊಲಿಟಿಕಲ್ ಎಕನಮಿ ಆಫ್ ಇನ್‌ಡೈರೆಕ್ಟ್ ರೂಲ್ ಮೈಸೂರು** ೧೮೮೧-೧೯೪೭, ಅಂಬಿಕ ಪಬ್ಲಿಕೇಷನ್, ನವದೆಹಲಿ,೧೯೭೮

೯೫. ೧೯೩೫ ರಿಂದ ೧೯೪೫ ರವರೆಗಿನ ಪೊಲೀಸ್ ಇಲಾಖೆಯ ಗುಪ್ತದಳ ವಿಭಾಗದ ವರದಿಗಳು, ಭಾಷಣಗಳು, ಇವುಗಳ ಜೆರಾಕ್ಸ್ ಪ್ರತಿಗಳು.

**ಪತ್ರಿಕೆಗಳು**

೧. ಸಾಧ್ವಿ

೨. ಇನ್‌ಕಿಲಾಬ್

೩. ಪೌರವಾಣಿ, ಪೌರವೀರ

೪. ದಿ ಹಿಂದೂ

೫. ಪ್ರಜಾವಾಣಿ

೬. ಹೊಸತು

೭. ಅರಿವು ಬರಹ

೮. ಮೈಸೂರ್ ಸ್ಟಾರ್

೯. ಕರ್ನಾಟಕ ವಾರಪತ್ರಿಕೆ

೧೦. ಒಕ್ಕಲಿಗರ ಪತ್ರಿಕೆ

೧೧. ಸಂಯುಕ್ತ ಕರ್ನಾಟಕ

**ಖಾಸಗಿ ಪತ್ರಗಳು (ಕ.ರಾ.ಪ) ಬೆಂಗಳೂರು**

೧. ಡಿ.ವಿ. ಗುಂಡಪ್ಪ ಪೇಪರ್ಸ್

೨. ಮಿರ್ಜಾಇಸ್ಮಾಯಿಲ್ ಕಲೆಕ್ಷನ್ಸ್

೩. ತಂಬುಚೆಟ್ಟಿ ಕಲೆಕ್ಷನ್ಸ್

**ಸಂದರ್ಶನಗಳು**

೧. ದೊರೆಸ್ವಾಮಿ ಎಚ್.ಎಸ್., ೩೦.೦೪.೨೦೦೮

೨. ಸೂರ್ಯನಾಥ ಕಾಮತ್., ೦೨.೦೫.೨೦೦೮

೩. ಎಂ.ಎನ್. ಜೋಯಿಸ್‌ರವರ ಮಗ ಜಯಸಿಂಹ ಮತ್ತು ಭಗತ್‌ಸಿಂಹ ಹಾಗೂ ತಮ್ಮ ಎಂ.ಎನ್.ಕೃಷ್ಣಮೂರ್ತಿ ಜೋಯಿಸ್, ೦೮.೦೬.೨೦೦೮

೪. ಬಿ.ಆರ್. ಪ್ರಾಣೇಶ್‌ರಾವ್‌ರವರ ಮಗಳು ಇಂದಿರಾ ಬಿ.ಪಿ. ೨೮.೦೯.೨೦೦೮

೫. ಜಿ.ಎಸ್. ಸುಬ್ರಹ್ಮಣ್ಯಂ, ಮಹಾಜನ್ ಸೆಕ್ರೇಟರಿ, ೧೪.೦೭.೨೦೦೮

೬. ಕೆ.ರಾಮಣ್ಣ, ಅರುಣ ಪತ್ರಿಕೆ, ೧೫.೦೭.೨೦೦೮

೭. ಸೀತಾರಾಮ ಅಯ್ಯಂಗಾರ್, ಸ್ವಾತಂತ್ರ್ಯ ಹೋರಾಟ ಸಂಘದ ಪ್ರೆಸಿಡೆಂಟ್, ೧೫.೦೭.೨೦೦೮



ಮೈಸೂರಿಗೆ ಜವಾಬ್ದಾರಿ ಸರ್ಕಾರ ತಂದು ಕೊಟ್ಟ ಕಾಂಗ್ರೆಸ್ ನಾಯಕರು



೧೯೪೭ನೇ ಸೆಪ್ಟೆಂಬರ್ ೧ ರಂದು ಬನಪ್ಪಾಪಾರ್ಕಿನಲ್ಲಿ
ಪ್ರಥಮ ಡಿಕ್ಟೇಟರ್ ಕೆ.ಸಿ. ರೆಡ್ಡಿ, ಮೈಸೂರು ಚಲೋ
ಚಳವಳಿ ಘೋಷಣೆ ಮಾಡಿದರು.



ಹಿಂದೂಪುರದ ಮೈಸೂರು ಸತ್ಯಾಗ್ರಹಶಿಬಿರ



೧೯೪೭ ರಲ್ಲಿ ನಡೆದ ಜವಾಬ್ದಾರಿ ಸರ್ಕಾರ ಸ್ಥಾಪನೆ ಹೋರಾಟದಲ್ಲಿ
ಒಟ್ಟು ೮ ಜನ ಜೈಲಿಗೆ ಹೋಗುವ ದಿನದ ಚಿತ್ರ ಮತ್ತು ವಿದ್ಯಾರ್ಥಿಗಳು.



೧೯೪೮ ರಲ್ಲಿ ರಚನೆಯಾದ ನೂತನ ಮಂತ್ರಿಮಂಡಲದ ಮಂತ್ರಿಗಳು (ಕುಳಿತಿರುವವರು)



ಕಾಂಗ್ರೆಸ್ ಧುರೀಣರೊಂದಿಗೆ ವಿದ್ಯಾರ್ಥಿ ಕಾಂಗ್ರೆಸ್‌ನ ಸದಸ್ಯರು




ಸಂಚಿಕೆ 5 **ಇನ್‌ಕಿಲಾಬ್** ಸೋಮವಾರ 8-9-47

**ಮಹಾಜನಗಳೇ ಮೋಸ ಹೋಗಬೇಡಿರಿ!**
**ಹೋರಾಟವನ್ನು ಮುಂದರಿಸಿರಿ!!**

ಮಹಾರಾಜರ ಘೋಷಣೆಯು ಇಂದು ಹೊರಬಿದ್ದಿದೆ. 8 ತಿಂಗಳಹಿಂದಿನ ಘೋಷಣೆಗೂ ಇಂದಿನ ಘೋಷಣೆಗೂ ಯಾವ ವಿಧವಾದ ವ್ಯತ್ಯಾಸವೂ ಇಲ್ಲ. ಬೇರೆ ಪದಗಳಲ್ಲಿ ಹೇಳಿದ್ದನ್ನೇ ಹೇಳಿರುತ್ತಾರೆ. ಕೆಳಗಿನ ಕಾಂಗ್ರೆಸ್ ಕೋರಿಕೆಗಳನ್ನು ಮನಸ್ಸಿನಲ್ಲಿಟ್ಟು ಈ ಘೋಷಣೆಯನ್ನು ಪರೀಕ್ಷಿಸಿದರೆ ಸ್ವಾತಂತ್ರ್ಯದ ಹೋರಾಟವನ್ನು ಮುಂದುವರಿಸಲೇ ಬೇಕೆಂಬುದು ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯದ ಕಾವನ್ನು ಕಡಿಮೆ ಮಾಡಲು ದಿವಾನ್- ತಂಬೂಚೆಟ್ಟರ ಕುತಂತ್ರವೇ ಈ ಘೋಷಣೆ.

ಕಾಂಗ್ರೆಸ್ಸಿನ ಕೋರಿಕೆಗಳು!-

೧೯೪೭ ರಲ್ಲಿ ಪ್ರಕಟವಾಗುತ್ತಿದ್ದ ಭೂಗತ ಪತ್ರಿಕೆ 'ಇನ್‌ಕಿಲಾಬ್'

